# ಶ್ರೀಕರ ಭಾಷ್ಯಪ್ರಶಸ್ತಿ

(ಭಾರತೀಯ ಸಂಸ್ಕೃತಿಗೆ ವೀರಶೈವದ ಕೊಡುಗೆ)

ಸಂಪಾದಕ

ಆಸ್ಥಾನ ವಿದ್ವಾನ್

ಎಂ. ಜಿ. ನಂಜುಂಡಾರಾಧ್ಯ



ಪ್ರಕಾಶಕರು

ಪ್ರಶಸ್ತಿ ಮತ್ತು ಅಭಿನಂದನ ಗ್ರಂಥ ಪ್ರಕಾಶನ ಸಮಿತಿ

೮೮೧, ಬಸವೇಶ್ವರ ರಸ್ತೆ,

# ಶ್ರೀಕರ ಭಾಷ್ಯ ಪ್ರಶಸ್ತಿ

(ಭಾರತೀಯ ಸಂಸ್ಕೃತಿಗೆ ವೀರಶೈವದ ಕೊಡುಗೆ)

ಸಂಪಾದಕ

ಆಸ್ಥಾನ ವಿದ್ವಾನ್

ಎಂ. ಜಿ. ನಂಜುಂಡಾರಾಧ್ಯ

ಪ್ರಕಾಶಕರು

ಪ್ರಶಸ್ತಿ ಮತ್ತು ಅಭಿನಂದನ ಗ್ರಂಥ ಪ್ರಕಾಶನ ಸಮಿತಿ

೮೮೧, ಬಸವೇಶ್ವರ ರಸ್ತೆ,

ಮೈಸೂರು.

SRIKARABHASHYA PRASASTI : Edited by Sri M. G. Nanjundaradhya, Retired Professor of Sanskrit, Mysore Published by PRASASTI MATTU ABINANDANA GRANTHA PRAKASANA SAMITI, 881, Basaveswara Road, Mysore 570 004.
First Edition : 26th January 1981 P. P. 218+XXXii+Vi=256



ಪ್ರಥಮ ಮುದ್ರಣ ೧೯೮೧

ಬೆಲೆ ರೂ. 20-00



ಪ್ರಬೋಧ ಮುದ್ರಣ ಮತ್ತು ಪ್ರಕಟಣಾಲಯ
ಬಸವೇಶ್ವರ ರಸ್ತೆ,
ಮೈಸೂರು-೪



ಶ್ರೀಪತಿಪಂಡಿತಾರಾಧ್ಯರು

# ಸಮರ್ಪಣೆ

## ಶ್ರೀಪತೀಶ್ವರ ಪಂಡಿತಾರಾಧ್ಯ ಗುರುವರರಿಗೆ

೧

ಬಾಂದಳದೆ ಭೋರ್ಗರೆದು ಗಂಗೋತ್ರಿಯಿಂದುಕ್ಕಿ
ಧುಮ್ಮಿಕ್ಕಿ ತಳಕಿಳಿದು ತುಳುಕಿ ಪರಿಶ್ರಮಿಸಿ
ಶಿವ ಕಪರ್ದವನಡರಿ ವೇಗರಾಗವನಳಿದು
ತಿಳಿಯಾಗಿ ಸವಿಯಾಗಿ ಭೋಗಯೋಗ್ಯಮುಮಾಗಿ
ಶ್ರುತಿ ಸೂತ್ರಸ್ಮೃತಿಯೆಂಬ ಪ್ರಸ್ಥಾನ ಭೂಮಿಕೆಯ
ನೊಡಗೊಂಡು ಮುಂಬರಿದು ಪಲಬಗೆಯ ಕವಲಾಗಿ
ಗುರುವರರ ಪೊಳಲಿನಲಿ ಬೆಳೆದೆಸೆದು
ಲೋಕಮಂ ತಣಿಸುತ್ತೆ ನಾಂದೆಸೆದು ಬೆಳಗುತಿಹ
ಸಂಸ್ಕಾರಿಗಳಿಗೆಲ್ಲ ಶಿವದೀಕ್ಷೆ ಕರುಣಿಸುತೆ
ಸರ್ವಾರ್ಥಸಂಪದವ ಬೆಳಗಿಸಿದ ಭವ್ಯಾತ್ಮ !
ಶ್ರೀಕರಾಭಿಧ ಭಾಷ್ಯಕರ್ತೃ ಕಾರಣಪುರುಷ
ದೀನಜನಮಂದಾರ ಸತ್ಯಸುಕೃತಾಕಾರ
ಶ್ರೀಪತೀಶ್ವರ ಪಂಡಿತಾರಾಧ್ಯ ಗುರುವರನೆ !
ನಿನ್ನಡಿಯ ಸರಸಿಜಕೆ ನೂರಾರು ನಮನಗಳು

೨

ಭೂಸುರಾವಾಸದಾ ವಿಜಯವಾಡದೊಳುದಯ
ವಾರಣಾಸಿಯ ಕಲಿಕೆ ಸಕಲಶಾಸ್ತ್ರಾಭ್ಯಾಸ
ಶ್ರೀಶೈಲ ಗುರುವಿರೂಪಾಕ್ಷರಿಂ ಶಿವದೀಕ್ಷೆ
ಶಿಭವಕ್ತ ಹಿರಿಮೆಯುಂ ಸಾರುವುದೆ ನಿಜನಿಷ್ಠೆ
ಭಕ್ತನೋರ್ವನ ಮನೆಯಲುಂಡುದಕೆ ನಿಂದಿಸಿದ
ಬೆಂಕಿದ್ವೈವವು ಎಂಬ ಸಾರುವರನೆಚ್ಚರಿಸಿ
ಕೆಂಡಗಳ ರೇಶಿಮೆಯ ಬಟ್ಟೆಯಲಿ ಬಿಗಿದಿಟ್ಟು
ಬನ್ನಿಮರದಲಿ ಕಟ್ಟೆ ವಿಪ್ರವರ ಮನೆಗಳೊಳು
ಬೆಂಕಿ ತಾಂ ಮರೆಯಾಗೆ ಪರಿತಪಿಸಿ ಬಂದೆರಗೆ
"ಮಣ್ಣಿನಲಿ ಪುಟ್ಟಿರ್ಪ ಚಿನ್ನ ಮಣ್ಣಾಗುವುದೆ ?
ವರಮಂತ್ರ ಪರಿಪೂತ ಶಿವಲಿಂಗ ಕಲ್ಲಹುದೆ?
ಲಿಂಗದೀಕ್ಷಿತ ಶರಣನಂ ಮನುಜನೆನಬಹುದೆ ? "
ಎಂದು ಬೋಧಿಸಿ ಭಾಷ್ಯದರ್ಥಮಂ ನಿರವಿಸಿದ
ಶ್ರೀಪತೀಶ್ವರ ಪಂಡಿತಾರಾಧ್ಯ ನೀಂ ಧನ್ಯ !

—ಆತುರವಾಣಿ

# ಬಿನ್ನಹ

ಮೈಸೂರು ವಿಶ್ವವಿದ್ಯಾನಿಲಯವು ಸುಮಾರು ಎರಡು ವರ್ಷಗಳ ಹಿಂದೆ ಶ್ರೀಪತಿ ಪಂಡಿತಾರಾಧ್ಯ ವಿರಚಿತ ಶ್ರೀಕರ ಭಾಷ್ಯದ ಅಧಿಕೃತ ಮುದ್ರಣವನ್ನು ಎರಡು ಸಂಪುಟಗಳಲ್ಲಿ ಪ್ರಕಟಿಸಿ ನಾಡಿನ ಅಭಿನಂದನೆಗೆ ಪಾತ್ರವಾಗಿದೆ. ಈ ಹೊತ್ತಿಗೆಯ ಸಂಪಾದಕರಾದ ಆಸ್ಥಾನ ವಿದ್ವಾನ್ ಶ್ರೀ. ಎಂ. ಜಿ. ನಂಜುಂಡಾರಾಧ್ಯರು ಭಾಷ್ಯದಲ್ಲಿನ ಪ್ರಗತಿಪರವಾದ ಅನೇಕ ಮಹತ್ತ್ವಾಂಶಗಳನ್ನು ತಮ್ಮ ವಿಸ್ತಾರವಾದ ಭೂಮಿಕೆಯಲ್ಲಿ ಪ್ರಸ್ತಾಪಿಸಿ ವಿದ್ವಜ್ಜನರು ಮೆಚ್ಚುವಂತೆ ತಮ್ಮ ಕರ್ತವ್ಯವನ್ನು ನಿರ್ವಹಿಸಿದ್ದಾರೆ.

ಎರಡನೆಯದಾಗಿ ಶ್ರೀಕರಭಾಷ್ಯದ ಅಧಿಕೃತ ಸಂಪಾದನ ಮತ್ತು ಪ್ರಕಟನ ಕಾರ್ಯವು ಸುಮಾರು ಒಂದು ಶತಮಾನದಷ್ಟು ಹಿಂದೆ ಪ್ರಾರಂಭವಾಯಿತಾದರೂ ಈ ದಿಸೆಯಲ್ಲಿ ಅನೇಕ ಸಂಘ ಸಂಸ್ಥೆಗಳು ನಿರ್ವಹಿಸಲಾಗದಿದ್ದ ಮಹತ್ಕಾರ್ಯ ಇಂದು ಕಾರ್ಯಗತವಾಗಿರುವುದಕ್ಕಾಗಿ ಈ ಮಹನೀಯರನ್ನು ಗೌರವಿಸುವುದು ನಾಡಿನ ಕರ್ತವ್ಯ.

ಈ ದಿಸೆಯಲ್ಲಿ ಸಮಾಲೋಚಿಸಿದ್ದ ಸಂಸ್ಕೃತಿ ಪ್ರಿಯರಾದ ಅನೇಕ ಮಹನೀಯರು ತಳೆದ ನಿರ್ಧಾರವೇ ಈ ಪ್ರಶಸ್ತಿ ಮತ್ತು ಅಭಿನಂದನ ಗ್ರಂಥ ಪ್ರಕಾಶನ ಸಮಿತಿಯ ಹಿನ್ನೆಲೆ. ಶ್ರೀಕರ ಭಾಷ್ಯಪ್ರಶಸ್ತಿ ಮತ್ತು ಅಭಿನಂದನ ಗ್ರಂಥಗಳನ್ನು ಸಮರ್ಪಿಸುವ ಉದ್ದೇಶವನ್ನು ತಳೆದಿದೆ.

ಪ್ರಕೃತ ಮಾನ್ಯಸಂಪಾದಕರು ಶ್ರೀಕರ ಭಾಷ್ಯಕ್ಕೆ ಬರೆದ ಭೂಮಿಕೆಯ ಸಾರವನ್ನು ಸಂಗ್ರಹಿಸಿ, ಅದರ ಮೇಲೆ ಅವತರಣಿಕೆ ಮತ್ತು ಇತರ ಪ್ರಕಟವಾಗಿರುವ ಅಭಿಪ್ರಾಯ ಭೇದಗಳಿಗೆ ಸಂಪಾದಕರು ನೀಡಿರುವ ಸಮಾಧಾನಗಳು ಹಾಗೂ ಶ್ರೀಕರಭಾಷ್ಯದ ಮೇಲೆ ಅನೇಕ ಪಂಡಿತ ಪ್ರಕಾಂಡರು ಬರೆದಿರುವ ಸಭಿಪ್ರಾಯಗಳನ್ನು ಶೇಖರಿಸಿ "ಶ್ರೀಕರ ಭಾಷ್ಯಪ್ರಶಸ್ತಿ" ಯನ್ನು ಓದುಗರ ಕರಕಮಲಗಳಲ್ಲಿ ನೀಡುತ್ತಿದ್ದೇವೆ. ಇದರಿಂದ ನಮ್ಮ ಹೊಣೆಯಲ್ಲಿ ಅರ್ಧಭಾಗ ನಿರ್ವಹಿಸಿದಂತಾಗಿದೆ,

ಎರಡನೆಯದಾಗಿ ಸುಮಾರು ಅರ್ಧಶತಮಾನದಷ್ಟು ಸುದೀರ್ಘವಾದ ಅವಧಿಯಲ್ಲಿ ಎಪ್ಪತ್ತಕ್ಕೂ ಮಿಕ್ಕು ಸಂಸ್ಕೃತ ಮತ್ತು ಕನ್ನಡಗಳಲ್ಲಿ ಅನೇಕ ಉತ್ತಮ ಗ್ರಂಥಗಳನ್ನು ಪ್ರಕಟಿಸಿ, ನೂರಾರು ಲೇಖನ, ಭಾಷಣ ಹಾಗೂ ಪ್ರವಚನಗಳ ಮೂಲಕ ನಾಡು ನುಡಿಗಳಿಗೆ ವಿಶೇಷತಃ ಭಾರತೀಯ ಸಂಸ್ಕೃತಿಗೆ ಅಪಾರವಾದ ಸೇವೆ ಸಲ್ಲಿಸುತ್ತಿರುವ ಶ್ರೀಯುತ. ಎಂ. ಜಿ. ನಂಜುಂಡಾರಾಧ್ಯರಿಗೆ ಅವರ ಜೀವನ ಮತ್ತು ವಿದ್ವಾಂಸರ ಲೇಖನಗಳನ್ನೊಳಗೊಂಡ ಅಭಿನಂದನಾ ಗ್ರಂಥವೊಂದನ್ನು ಸಮರ್ಪಿಸುವ ಮನೀಷೆಯಿದೆ. ಇದು ಸಂಸ್ಕೃತಿ ಪ್ರಿಯರಾದ ಮಹಾಜನರ ಉದಾರಾಶ್ರಯವನ್ನು ಅವಲಂಬಿಸಿದೆ. "ಶ್ರೀಕರ ಭಾಷ್ಯಪ್ರಶಸ್ತಿ" ಗ್ರಂಥ ಬಿಡುಗಡೆ ಸರಳ ಸಮಾರಂಭವು ಮೈಸೂರು ಜಪದಕಟ್ಟೆ ಮಠಾಧ್ಯಕ್ಷರ ಸಮ್ಮುಖದಲ್ಲಿ ೧೧-೯-೧೯೮೦ರಲ್ಲಿ ನೆರವೇರಿತು. ಸಭಾಧ್ಯಕ್ಷತೆಯನ್ನು ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರಾದ ಶ್ರೀ. ಜೆ. ಬಿ. ಮಲ್ಲಾರಾಧ್ಯರು ವಹಿಸಿದ್ದರು. ಮೈಸೂರು ವಿಭಾಗದ ಸಂಸ್ಕೃತ ಶಿಕ್ಷಣದ ಮುಖ್ಯ ವೀಕ್ಷಕರಾದ ಶ್ರೀ ವಿ. ಎಸ್. ಜಂಗ್ಳೂರ್‌ವಾಡ, ಎಂ. ಎ., ಅವರು ಗ್ರಂಥವನ್ನು ಬಿಡುಗಡೆ ಮಾಡಿದರು. ಸಮಿತಿಯು ಈ ಮಹನೀಯರಿಗೆ ತನ್ನ ಕೃತಜ್ಞತೆಯನ್ನು ಒಪ್ಪಿಸುತ್ತದೆ.

ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟ ಪ್ರಬೋಧ ಪ್ರೆಸ್ಸಿನ ಒಡೆಯರು ಹಾಗೂ ಈ ದಿಸೆಯಲ್ಲಿ ನೆರವು ನೀಡಿದ ಮಹಾಜನರಿಗೆ ನಾವು ಚಿರಋಣಿಗಳು.

ಮೈಸೂರು,
೧೭-೯-೧೯೮೦

ಎಚ್ ಗಂಗಾಧರನ್
ಅಧ್ಯಕ್ಷರು
ಪ್ರಶಸ್ತಿ ಮತ್ತು ಅಭಿನಂದನ ಗ್ರಂಥಪ್ರಕಾಶನ ಸಮಿತಿ

# ಮುನ್ನುಡಿ

ಮೈಸೂರು ವಿಶ್ವವಿದ್ಯಾಲಯವು ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆಯ ಆಶ್ರಯದಲ್ಲಿ ಶ್ರೀಕರ ಭಾಷ್ಯವನ್ನು ಪ್ರಕಟಿಸುತ್ತಿರುವುದು ಪ್ರಶಂಸನೀಯವಾದ ಪ್ರಯತ್ನ. ನನ್ನ ಮಿತ್ರರಾದ ಡಾ. ವಿದ್ವಾನ್ ಜಿ. ಮರುಳಸಿದ್ಧಯ್ಯ, ಎಂ.ಎ. ಪಿ.ಎಚ್.ಡಿ., ಅವರ ನಿರ್ದೇಶನದಲ್ಲಿ ಶಕ್ತಿವಿಶಿಷ್ಟಾದ್ವೈತ ನಿವೃತ್ತ ಪ್ರಾಧ್ಯಾಪಕರೂ, ಅನೇಕ ಗ್ರಂಥಗಳನ್ನು ರಚಿಸಿ ಭರತ ಖಂಡದ ಖ್ಯಾತಿವೆತ್ತ, ಅನೇಕ ವಿದ್ವಾಂಸರ ಪ್ರಶಂಸೆಗೆ ಪಾತ್ರರೂ, ಬಹುಮುಖ ಪ್ರತಿಭೆಯಿಂದ ಶೋಭಿಸುತ್ತಿರುವ ಸಮಾಜದ ಗಣ್ಯ ವ್ಯಕ್ತಿಗಳೂ, ಅನುಭವಿಗಳೂ ಆದ ಶ್ರೀ ನಂಜುಂಡಾರಾಧ್ಯರ ಸಂಪಾದಕತ್ವದಲ್ಲಿ ಇದು ಹೊರ ಬರುತ್ತಿರುವುದು ಸಂತಸದ ಸಂಗತಿ.

ನನಗೆ ಶ್ರೀಕರಭಾಷ್ಯದ ಪ್ರಕಾಶನದಲ್ಲಿ ಇರುವ ಆಸಕ್ತಿ ವಂಶಾನುಗತವಾದದ್ದು. ಏಕೆಂದರೆ ಲಿಂಗೈಕ್ಯರಾದ ಉಭಯ ಭಾಷಾ ಪಂಡಿತರೂ ಅಪ್ರತಿಮ ನ್ಯಾಯಮೂರ್ತಿಗಳೂ ಆದ ವೇ. ಬಸವಾರಾಧ್ಯ, ಬಿ.ಎ.ಬಿ.ಎಲ್., ಅವರು ಸುಮಾರು ಐವತ್ತೈದು ವರ್ಷಗಳ ಹಿಂದೆಯೇ ಅಂದರೆ 1923 ನೇ ಇಸವಿಯಷ್ಟು ಹಿಂದೆಯೇ ಶ್ರೀಕರಭಾಷ್ಯದ ಪ್ರತಿಯನ್ನು ಆಂಧ್ರ ಪ್ರದೇಶದ ಸಿಕಿಂದ್ರಾಬಾದಿನಿಂದ ಬರೆಯಿಸಿ ತರಿಸಿ, ಆರಾಧ್ಯ ಮಹಾಸಭೆಯ ಆಶ್ರಯದಲ್ಲಿ ಭಾಷ್ಯದ ಕೆಲವು ಭಾಗವನ್ನು ಸಂಪಾದಿಸಿ ಮುದ್ರಿಸಿಯೂ ಇದ್ದರು. ಆದರೆ ದಿ|| ಸಿ. ಹಯವದನ ರಾಯರು ಈ ಪ್ರಯತ್ನದಲ್ಲಿ ತೊಡಗಿದ ಮೇಲೆ ಮುದ್ರಣ ಕಾರ್ಯವು ಕಾರಣಾಂತರದಿಂದ ಸ್ಥಗಿತವಾದುದು ದುರದೃಷ್ಟಕರ.

ಪ್ರಕೃತ ಪ್ರಕಾಶನದ ಮೊದಲ ಸಂಪುಟವನ್ನು ಆಮೂಲಾಗ್ರವಾಗಿ ಪರಿಶೀಲಿಸಿದ್ದೇನೆ. ಮತ್ತು ಇದರ ಮೇಲೆ ಬಂದಿರುವ ವಿದ್ವಾಂಸರ ವಿಮರ್ಶಾತ್ಮಕ ಅಭಿಪ್ರಾಯಗಳನ್ನು ಭಾಷ್ಯ ಭೂಮಿಕೆಯ ಕನ್ನಡ ಭಾಷಾಂತರವನ್ನೂ ಆಸಕ್ತಿಯಿಂದ ಅವಲೋಕಿಸಿದ್ದೇನೆ.

ಶ್ರೀಯುತ ಆರಾಧ್ಯರು ಇದಕ್ಕೆ ಬರೆದಿರುವ ಸುಮಾರು ೨೧೦ ಪುಟಗಳಷ್ಟು ಬೃಹತ್ ಭೂಮಿಕೆಯು ಭಾರತೀಯ ಸಂಸ್ಕೃತಿಯ ಅದರಲ್ಲೂ ವೀರಶೈವ ದರ್ಶನದ ಮೇಲೆ ಹೆಚ್ಚು ಬೆಳಕನ್ನು ಚೆಲ್ಲಿದೆ ಎಂದರೆ ಅತಿಶಯೋಕ್ತಿಯಲ್ಲ. ಏಕೆಂದರೆ ಈ ಭೂಮಿಕೆಯನ್ನು ಓದುವುದರಿಂದ ಭಾರತೀಯ ಸಂಸ್ಕೃತಿಯ ಸ್ವರೂಪ, ವೇದಾಗಮಗಳ ಹಿನ್ನೆಲೆ, ಶೈವ ಧರ್ಮದ ಪ್ರಭೇದಗಳು, ಅವುಗಳಲ್ಲಿ ವೀರಶೈವದ ಸ್ಥಾನ. ಮುಂತಾದ ಗಮನಾರ್ಹವಾದ ಅಂಶಗಳು ಬಿತ್ತರಿಸಲ್ಪಟ್ಟಿವೆ. ಶ್ರೀಕರಭಾಷ್ಯವನ್ನು ಕುರಿತು ಉಂಟಾಗಿದ್ದ ಎಷ್ಟೋ ಸಂದೇಹಗಳು ನಿವಾರಿಸಲ್ಪಟ್ಟು ಹಾಗೂ ಅನೇಕ ತಪ್ಪು ತಿಳುವಳಿಕೆಗಳು ಇದರಲ್ಲಿ ಸಪ್ರಮಾಣವಾಗಿ ಸರಿಪಡಿಸಲ್ಪಟ್ಟಿವೆ. ಈ ದಿಸೆಯಲ್ಲಿ ಶ್ರೀಕರಭಾಷ್ಯ ಸ್ವರೂಪ ದರ್ಶನಕ್ಕೆ ಈ ಭೂಮಿಕೆ ಹಿಡಿದ ಕನ್ನಡಿಯೆಂದರೆ ತಪ್ಪಾಗದು.

ಶೈವಸಂಸ್ಕೃತಿ ಅತಿ ಪ್ರಾಚೀನವಾದುದು. ಅದರ ಮೂಲವು ವೇದ ಪೂರ್ವಯುಗಕ್ಕೆ ಸಂಬಂಧಿಸಿದುದೆಂದು ಹೇಳಲಾಗುತ್ತಿರುವ ಹರಪ್ಪಾ : ಮೊಹೆಂಜೋದಾರೋ ಸಂಸ್ಕೃತಿಯಲ್ಲಿ ಕಂಡು ಬರುತ್ತದೆ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಮುಂದೆ ಇದು ವೇದಾಗಮೋಪನಿಷತ್ತು

ಗಳಲ್ಲಿ ಕ್ರಮ ವಿಕಾಸವನ್ನು ಹೊಂದಿ ಶಾಖೋಪಶಾಖೆಗಳಲ್ಲಿ ಹರಡಿ ಕ್ರಿ. ಶ. ಹನ್ನೆರಡನೆಯ ಶತಮಾನದ ಬಸವಾದಿ ಶಿವಶರಣರ ಕಾಲವಲ್ಲಿ ಪರಿಪೂರ್ಣತೆಯನ್ನು ಪಡೆಯಿತೆಂದು ಭಾರತ ಸಂಸ್ಕೃತಿಯ ಅಧ್ಯಯನದಿಂದ ವೇದ್ಯವಾಗುತ್ತದೆ.

ಬಸವಣ್ಣನವರ ವಿಚಾರ ಕ್ರಾಂತಿಗೆ, ಅವರ ಧಾರ್ಮಿಕ ಸ್ಫೂರ್ತಿಗೆ ತಕ್ಕ ಹಿನ್ನೆಲೆಯನ್ನು ರಚಿಸಿದ ಕೀರ್ತಿ ಬಸವ ಪೂರ್ವಯುಗಕ್ಕೆ ಸಂಬಂಧಿಸಿದ ವೀರಶೈವ ಆರಾಧ್ಯ ಸಂಪ್ರಾದಾಯಕ್ಕೆ ಸೇರಿದ್ದು ಎಂಬುದನ್ನು ಮಾನ್ಯ ಸಂಪಾದಕರು ತಮ್ಮ ಭೂಮಿಕೆಯಲ್ಲಿ ವಿವರಿಸಿದ್ದಾರೆ. ಅದನ್ನು ಪ್ರತಿಬಿಂಬಿಸುವ ಕೃತಿ ಶ್ರೀಕರಭಾಷ್ಯ.

ಆರಾಧ್ಯ ಸಂಪ್ರದಾಯವು ಮುಖ್ಯವಾಗಿ ಸಿದ್ಧತ್ರಯ, ಆರಾಧ್ಯತ್ರಯ ಮತ್ತು ಪಂಡಿತತ್ರಯ ಎಂಬ ಹನ್ನೆರಡು ಮಂದಿ ಮಹನೀಯರ ಪರಂಪರೆಯನ್ನು ಹೇಳುತ್ತದೆ. ರೇವಣಸಿದ್ಧ, ಮರುಳಸಿದ್ಧ ಏಕೋರಾಮಸಿದ್ಧ, ಶ್ವೇತಾಚಾರ್ಯ, ಲಕುಲೀಶಾಚಾರ್ಯ, ನೀಲಕಂಠಶಿವಾಚಾರ್ಯ, ಉದ್ಭಟಾರಾಧ್ಯ, ಕೋಟಿ ಪಲ್ಲಾರಾಧ್ಯ, ವೇಮಾರಾಧ್ಯ, ಶ್ರೀಪತಿ ಪಂಡಿತ, ಮಂಚಣ ಪಂಡಿತ ಮತ್ತು ಮಲ್ಲಿಕಾರ್ಜುನ ಪಂಡಿತ ಎಂದು.

ಶ್ರೀಕರಭಾಷ್ಯದ ಪ್ರಾರಂಭದಲ್ಲಿ ಸದಾಶಿವ, ಶಕ್ತಿಧರ, ಚಂಡೀಶ್ವರ, ಭಂಗಿರಿಟಿ, ಶಿಲಾದ, ಕುಂಭೋದ್ಭವ ಮತ್ತು ಆಚಾರ್ಯ ರೇಣುಕ, ಮರುಲಸಿದ್ಧ, ಏಕೋರಾಮಸಿದ್ಧ ಎಂದು ಹೇಳಿ, ಶಿವತತ್ವವೇತ್ತರಲ್ಲಿ ನಂದಿ, ವಿಷ್ಣು ಮತ್ತು ಕುಮಾರರು ಮುಖ್ಯ ಎಂದು ಸುತ್ತಿಸಲಾಗಿದೆ. ಈ ಶ್ರೇಣಿಯಲ್ಲಿ ಶ್ರೀ ಪತಿಪಂಡಿತರು ಮತ್ತು ಮಂಚಣಪಂಡಿತರು ಬಸವಣ್ಣನವರ ಹಿರಿಯ ಸಮಕಾಲೀನರು. ಮಲ್ಲಿಕಾರ್ಜುನ ಪಂಡಿತರು ಬಸವಣ್ಣನವರ ಕಾಲದವರೇ. ಶ್ರೀಪತಿ ಪಂಡಿತರು ರಚಿಸಿರುವ ಶ್ರೀಕರ ಭಾಷ್ಯ, ನೀಲಕಂಠ ಶಿವಾಚಾರ್ಯರ ನೀಲಕಂಠ ಭಾಷ್ಯಗಳಲ್ಲವೆ. ಮಂಚಣ ಪಂಡಿತರೂ ಒಂದು ಸೂತ್ರಭಾಷ್ಯವನ್ನು ಬರೆದಿರುವಂತೆ ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಆದರೆ ಅದು ಇಂದು ಉಪಲಭ್ಯವಿಲ್ಲ.

ಮೇಲೆ ಕಂಡ ಆರಾಧ್ಯ ಸಂಪ್ರದಾಯವು ನೀಲಕಂಠಭಾಷ್ಯ, ಶ್ರೀಕರಭಾಷ್ಯ, ಸಿದ್ಧಾಂತ ಶಿಖಾಮಣಿ (ಶಿವಯೋಗಿ ಶಿವಾಚಾರ್ಯಕೃತ) ಮತ್ತು ಲಿಂಗಧಾರಣ ಚಂದ್ರಿಕೆ (ನಂದಿಕೇಶ್ವರ ಕೃತ) ಗಳನ್ನು ಹಿಂದಿನಿಂದಲೂ ಪ್ರಮಾಣವಾಗಿ ಸ್ವೀಕರಿಸುತ್ತಾ ಬಂದಿದೆ.

ಆಚಾರ್ಯ ರೇಣುಕರು ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸಿದ ಶಿವ ಸಿದ್ಧಾಂತವು ಸಿದ್ಧಾಂತ ಶಿಖಾಮಣಿಯಲ್ಲಿ ಪ್ರತಿಪಾದಿತವಾಗಿದೆ. ಅಗಸ್ತ್ಯರು ಬ್ರಹ್ಮ ಸೂತ್ರಗಳ ಮೇಲೆ ರಚಿಸಿರುವ ಸೂತ್ರವೃತ್ತಿಯು ಶ್ರೀಪತಿ ಪಂಡಿತರ ಭಾಷ್ಯಕ್ಕೆ ಆಧಾರ ಎಂದು ಹೇಳಲಾಗಿದೆ.

ವೀರಶೈವವನ್ನು ಅತ್ಯಾಶ್ರಮ ಎಂದು ಹೇಳಲಾಗಿದೆ. ಇಲ್ಲಿ 'ಆಶ್ರಮ' ಎಂಬುದು ವರ್ಣಕ್ಕೂ ಉಪಲಕ್ಷಣ. 'ಅತ್ಯಾಶ್ರಮ' ಎಂದರೆ 'ಅತಿವರ್ಣಾಶ್ರಮ' ಎಂದು ಅರ್ಥ. ಇಲ್ಲಿ 'ಅತಿ' ಎಂದರೆ ವರ್ಣ ಮತ್ತು ಆಶ್ರಮಗಳನ್ನು ಬಿಟ್ಟದ್ದು ಎಂದು ಅರ್ಥವಲ್ಲ: ಅದು 'ಅತಿಶಯವಾದ ವರ್ಣಾಶ್ರಮಗಳುಳ್ಳದ್ದು' ಎಂಬ ಅರ್ಥದಲ್ಲಿದೆ. ಎಂದರೆ ಮಾನವನು ಪ್ರಾಕೃತವಾದ ಯಾವುವೇ ವರ್ಣ ಅಥವಾ ಆಶ್ರಮದಲ್ಲಿರಲಿ ಅವನು ಸುಸಂಸ್ಕೃತನಾಗಿ ಶಿವಕೃಪೆ (ಶಕ್ತಿಪಾತ)ಗೆ ಪಾತ್ರನಾಗಿದ್ದ ಪಕ್ಷದಲ್ಲಿ ಗುರು ಅವನನ್ನು ಪರೀಕ್ಷಿಸಿ ಅವನಿಗೆ ಲಿಂಗಧಾರಣಾತ್ಮಕ ಶಿವದೀಕ್ಷೆ ಮಾಡಬಹುದೆಂದು ಇದರ ಅಭಿಪ್ರಾಯ. ಇದು ಸಿದ್ಧಾಂತ ಶಿಖಾಮಣಿಯಲ್ಲಿ ಸುಂದರವಾಗಿ ಉಕ್ತವಾಗಿದೆ. ಸಿದ್ಧಾಂತ ಶಿಖಾಮಣಿಯನ್ನು ಆಧಾರವಾಗಿ ಹೊಂದಿರುವ ಶ್ರೀಕರ ಭಾಷ್ಯದಲ್ಲಿಯೂ ಈ ಅಂಶವು ಸ್ಪಷ್ಟವಾಗಿದೆ. ಪ್ರಾಕೃತ ವರ್ಣ

ಧರ್ಮದಲ್ಲಿ 'ದ್ವಿಜ'ರಿಗೆ ಮಾತ್ರ ಉಪನಯನ ಸಂಸ್ಕಾರಕ್ಕೆ ಅವಕಾಶ. ಉಳಿದ ಸ್ತ್ರೀ-ಶೂದ್ರರಿಗೆ ಅವಕಾಶ ವಿಲ್ಲ.ಆದ್ದರಿಂದಲೇ ಅವರು ಬ್ರಹ್ಮ ವಿದ್ಯೆಗೂ ಅರ್ಹರಲ್ಲ. ಈ ದಿಸೆಯಲ್ಲಿ ಬ್ರಹ್ಮಸೂತ್ರಗಳಲ್ಲಿ ಬಂದಿರುವ ಅಪಶೂದ್ರಾಧಿಕರಣಕ್ಕೆ ಶಂಕರಾದಿ ಮೂವರು ಆಚಾರ್ಯರೂ ಮೇಲಿನ ಅರ್ಥವನ್ನು ಸಮರ್ಥಿಸಿಯೇ ಭಾಷ್ಯಗಳನ್ನು ಬರೆದಿದ್ದಾರೆ. ಆದರೆ ಈ ಸಂದರ್ಭದಲ್ಲಿ ಮಾನ್ಯ ಸಂಪಾದಕರು 'ಅಪಶೂದ್ರಾಧಿಕರಣ ವನ್ನು ಕುರಿತು ವಿಸ್ತಾರವಾಗಿ ಚರ್ಚಿಸಿ, ವೀರಶೈವ ಸಂಪ್ರದಾಯದ ಪ್ರಕಾರ ಅನೇಕ ಉದಾಹರಣೆ ಗಳನ್ನು ಕೊಟ್ಟು, 'ಶಕ್ತಿಪಾತ' ಪರಿಪೂತರಾದ ಸಮಸ್ತ ಮಾನವರೂ ಶಿವದೀಕ್ಷೆ ಮತ್ತು ಬ್ರಹ್ಮ ವಿದ್ಯೆಗೆ ಅಧಿಕಾರಿಗಳು ಎಂಬುದನ್ನೂ ಈ ಬಗ್ಗೆ ಭಾಷ್ಯಕಾರರ ಸಮ್ಮತಿಯನ್ನೂ ಇತ್ತು ಸಮರ್ಥಿ ಸಿರುವುದು ಮನನೀಯವಾಗಿದೆ.

ಇಂಥ ಪವಿತ್ರವಾದ ಅತ್ಯಾಶ್ರಮ-ವೀರಶೈವದ ಹಿರಿಮೆಯನ್ನು ಕಂಡು ಆಕರ್ಷಿತರಾದವರಲ್ಲಿ ಬ್ರಾಹ್ಮಣರು ಮೊದಲಿಗರು. ಇವರು ವೀರಶೈವ ಆಚಾರ್ಯರಿಂದ ಶಿವದೀಕ್ಷೆಯನ್ನು ಪಡೆದವರಾದರೂ ಆಗ್ಗೆ ಇವರಲ್ಲಿ ಇನ್ನೂ ಕೆಲವರಿಗೆ ಬ್ರಾಹ್ಮಣ್ಯದ ಅಭಿಮಾನ ಬಿಟ್ಟಿರಲಿಲ್ಲ ಎಂಬುದು ಮಲ್ಲಿಕಾರ್ಜುನ ಪಂಡಿತಾರಾಧ್ಯರ 'ಭಕ್ತಿಮೀರಿ ವಲವು ಬ್ರಾಹ್ಮಣ್ಯಂಬುಕೋ ಬೊತ್ತು ಬಾಯಲೇನು ಬಸವಲಿಂಗ' ಎಂಬ ಬಸವಸುತ್ತಿಯಿಂದ ವೇದ್ಯವಾಗುತ್ತದೆ. ಇಂಥವರು ಲಿಂಗ ಮತ್ತುಯಜ್ಞೋಪವೀತಗಳೆರಡನ್ನೂ ಉಳಿಸಿಕೊಂಡು ಆರಾಧ್ಯ ಬ್ರಾಹ್ಮಣರೆನಿಸಿದ್ದಾರೆ. ಇವರು ಕರ್ಮಾಧಿಕಾರಕ್ಕಾಗಿ ಉಪನಯನವನ್ನೂ ಮೋಕ್ಷಕ್ಕಾಗಿ ಲಿಂಗಧಾರಣವನ್ನೂ ಮಾಡಿಕೊಂಡಿರುವುದಾಗಿ ಹೇಳಿಕೊಳ್ಳುತ್ತಾರೆ.

ಮತ್ತೆ ಕೆಲವರು ತಮ್ಮ ಹಿಂದಿನ ಜನ್ಮ ಪ್ರಧಾನವಾದ ಋಷಿಗೋತ್ರಗಳನ್ನು ತ್ಯಜಿಸಿ. ವೀರ ಶೈವ ಆಚಾರ್ಯರಿಂದ ಶಿವದೀಕ್ಷೆಯನ್ನು ಪಡೆದು ಪ್ರಮಥ ಗೋತ್ರಗಳನ್ನು ಹೇಳತೊಡಗಿದರು. ಇವರಲ್ಲಿ ಶ್ರೀಪತಿ ಪಂಡಿತ, ಮಂಚಣ ಪಂಡಿತ ಮತ್ತು ಉದ್ಭಟಾರಾಧ್ಯ ಮುಂತಾದವರು ಮುಖ್ಯರು. ಇವರ ಆದರ್ಶವನ್ನು ಅನುಸರಿಸಿಯೇ ಮಹಾನುಭಾವಿಗಳಾದ ಬಸವಣ್ಣನವರು ಸಹ ಬಾಲ್ಯದಲ್ಲಿ ತಮಗೆ ಏರ್ಪಟ್ಟಿದ್ದ ಉಪನಯನ ಕಾಲದಲ್ಲಿ ಹಾಕಿದ್ದ 'ಕರ್ಮಲತೆ'ಯಂತಿದ್ದ ಯಜ್ಞೋಪವೀತವನ್ನು ಬಿಟ್ಟುಶಿವ ದೀಕ್ಷೆಯನ್ನು ಪಡೆದ ವಿಚಾರವನ್ನು ಹರಿಹರ ಮುಂತಾದ ಮಹಾಕವಿಗಳು ಚಿತ್ರಸಿಯೇ ಇದ್ದಾರೆ. ಇವೇ ಮುಂತಾದ ವಿಚಾರಗಳನ್ನು ಮಾನ್ಯ ಸಂಪಾದಕರು ತಮ್ಮ ಭೂಮಿಕೆಯಲ್ಲಿ ಸಪ್ರಮಾಣವಾಗಿ ವಿವರಿಸಿ ದ್ದಾರೆ. ಈ ದಿಸೆಯಲ್ಲಿ ಇಲ್ಲಿ ವಿವರಿಸಲ್ಪಟ್ಟಿರುವ ಗೋತ್ರ, ಸೂತ್ರ, ಯಜ್ಞೋಪವೀತ, ಶಿಖೆ ಮುಂತಾದ ಪದಗಳ ನಿರ್ವಚನವು ಅವಲೋಕನೀಯ.

ಭಾಷ್ಯದಲ್ಲಿ ಬರುವ ಮುಖ್ಯ ವಿಷಯಗಳನ್ನು ಅನುಸರಿಸಿ ಸಂಪಾದಕರು ಕೊಟ್ಟಿರುವ ಶೀರ್ಷಿಕೆಗಳು ಓದುಗರಿಗೆ ಮಾರ್ಗದರ್ಶನವನ್ನು ಒದಗಿಸುವುದಲ್ಲದೆ ಭಾಷ್ಯದ ವೈಶಿಷ್ಟ್ಯವನ್ನು ಸಾರುತ್ತವೆ. ವೀರಶೈವ ಸಿದ್ಧಾಂತದ ಸರ್ವಾಂಗೀಣವಾದ ಸ್ವರೂಪವನ್ನು ತಿಳಿಯಲು ಈ ಭೂಮಿಕೆ ಸಹಾಯಕವಾಗಿದೆ. ಗ್ರಂಥದ ಕಡೆಯಲ್ಲಿ ಕೊಟ್ಟಿರುವ ಅನುಬಂಧಗಳು ತತ್ತ್ವಜಿಜ್ಞಾಸುಗಳಾದ ವಿದ್ಯಾರ್ಥಿಗಳಿಗೆ ಸಂಶೋಧ ಕರಿಗೆ ತುಂಬಾ ಉಪಯುಕ್ತವಾಗಿವೆ. ಇದಕ್ಕಾಗಿ ಮಾನ್ಯ ಸಂಪಾದಕರು, ನಿರ್ದೇಶಕರು. ಹಾಗೂ ಮೈಸೂರು ವಿಶ್ವವಿದ್ಯಾಲಯದ ಅಧಿಕಾರವರ್ಗಗಳು ಎಲ್ಲರ ಮೆಚ್ಚುಗೆಗೆ ಪಾತ್ರವಾಗಿವೆ.

ಶ್ರೀಕರಭಾಷ್ಯ ಒಂದು ಮೇರು ಕೃತಿ ಎಂದರೆ ತಪ್ಪಲ್ಲ. ಶ್ರೀಪತಿ ಪಂಡಿತರು ಇದನ್ನು ರಚಿಸಿದ ಏಕೈಕ ಮಹಾನ್‌ವ್ಯಕ್ತಿ. ಬೇರೆಯವರಾರೂ ಈ ಭಾಷ್ಯ ರಚನೆಯಲ್ಲಿ ಭಾಗಿಗಳು ಎಂದು ಹೇಳುವುದು ಸಮಂಜಸವಲ್ಲ. ವೇದಾಗಮೋಪನಿಷತ್ತುಗಳು, ತರ್ಕ, ಮೀಮಾಂಸಾದಿ ಶಾಸ್ತ್ರಗಳು ಪುರಾಣ-ಇತಿಹಾಸ

ತತ್ವಶಾಸ್ತ್ರ ಇತ್ಯಾದಿಗಳಲ್ಲಿ ಅಪ್ರತಿಮ ಪಾಂಡಿತ್ಯವನ್ನುಗಳಿಸಿ, ಕೀರ್ತಿವೆತ್ತ ಶ್ರೀಪತಿಪಂಡಿತರ ಘನತೆಗೆ, ವ್ಯಕ್ತಿತ್ವಕ್ಕೆ ಕುಂದು ತರುವ ಯಾವುದೇ ಅಭಿಪ್ರಾಯವನ್ನೂ ಸೂಚಿಸಲು ಸಾಕಷ್ಟು ಸಾಕ್ಷ್ಯಾಧಾರಗಳು ಇರಬೇಕಾದುದು ಅವಶ್ಯವೆನಿಸಿದೆ.

ಒಟ್ಟಿನಲ್ಲಿ ಸನ್ಮಾನ್ಯ ಸಂಪಾದಕರಾದ ಶ್ರೀ ನಂಜುಂಡಾರಾಧ್ಯರವರ ಪಾಂಡಿತ್ಯ, ಪ್ರತಿಭೆ, ತತ್ವನಿಷ್ಠೆ, ತರ್ಕಬದ್ಧ ವಿಚಾರಸರಣಿಗಳು ನನ್ನ ಮನಸ್ಸನ್ನು ಸೂರೆಗೊಂಡಿವೆ. ಈ ಅಸಾಧಾರಣ ಕೃತಿಗೆ ಮುನ್ನುಡಿಯನ್ನು ಬರೆಯುವ ಸೌಭಾಗ್ಯ ದೊರೆತುದು ನನಗೆ ಹೆಚ್ಚಿನ ಸಂತೋಷವನ್ನುಂಟುಮಾಡಿದೆ ಎಂದು ಮತ್ತೆ ಹೇಳಬೇಕಾಗಿಲ್ಲ.

ಜಿ. ಬಿ. ಮಲ್ಲಾರಾಧ್ಯ.
ಎಂ. ಎ., ಐ. ಎ. ಎಸ್., (ನಿವೃತ್ತ),
ಅಧ್ಯಕ್ಷ,
೧೭-೪-೭೮ ಅಖಿಲ ಭಾರತ ವೀರಶೈವ ಮಹಾಸಭೆ, ಬೆಂಗಳೂರು.

# ವಿದ್ವಾಂಸರ ಅಭಿಪ್ರಾಯಗಳು

## ೧

ಮಹಾಮಹೋಪಾಧ್ಯಾಯ,
ಪಂಡಿತರಾಜ ವಿ. ಎಸ್. ರಾಮಚಂದ್ರ ಶಾಸ್ತ್ರೀ.
ಆಸ್ಥಾನ ವಿದ್ವಾನ್—ಶೃಂಗೇರಿ ಮಠ
ನಿವೃತ್ತ ಪ್ರಿನ್ಸಿಪಾಲ್ —ಸಂಸ್ಕೃತ ಮಹಾ ವಿದ್ಯಾಲಯ
ವಾರಾಣಸೀ ಹಿಂದೂ ವಿಶ್ವವಿದ್ಯಾಲಯ.

( ಸಂಸ್ಕೃತ ಮೂಲದ ಕನ್ನಡ ಭಾಷಾಂತರ. )

ಎಲ್ಲ ತಂತ್ರ ಸಿದ್ಧಾಂತಗಳೂ ತತ್ತ್ವ ಜ್ಞಾನದಿಂದ ನಿಃಶ್ರೇಯಸ್ಸು ಎಂದು ಹೇಳುತ್ತವೆ. ತತ್ತ್ವ ಜ್ಞಾನವು ಋಗ್ವೇದವೇ ಮೊದಲಾದ ಶಾಸ್ತ್ರದಿಂದ ಮಾತ್ರವೇ ತಿಳಿಯ ತಕ್ಕದ್ದು ಎಂಬುದು ವೇದ ಪ್ರಾಮಾಣ್ಯವನ್ನು ಒಪ್ಪುವವರ ದೃಢ ನಿಶ್ಚಯ. ವೇದಾಂತಗಳು ತತ್ತ್ವ ನಿರ್ಣಯಕ್ಕೆ ಮುಖ್ಯ ಸಾಧನ ಗಳಾಗಿವೆ. ಪರತಂತ್ರ ಪ್ರಜ್ಞೆಯುಳ್ಳವರಿಗೆ ವೇದಾಂತಾರ್ಥ ನಿರ್ಣಯಿಸುವ ನ್ಯಾಯ ಪ್ರದರ್ಶನಕ್ಕಾಗಿ ಬಾದರಾಯಣರ ಬ್ರಹ್ಮ ಸೂತ್ರಗಳು ಪ್ರವೃತ್ತವಾಗಿವೆ. ಉಪವರ್ಷರೇ ಮೊದಲಾದ ಆಚಾರ್ಯ ರಿಂದ ಬ್ರಹ್ಮ ಸೂತ್ರಗಳಿಗೆ ವಿವರಣ ರೂಪವಾಗಿರುವ ವೃತ್ತಿಗಳು ಹೊರಟವೆ. ಅನಿತರ ಸಾಧಾರಣ ಪ್ರತಿ ಭಾಪ್ರಕರ್ಷಶಾಲಿಗಳಾದ ಶಂಕರ ಭಗವತ್ಪಾದರೇ ಮುಂತಾದ ಆಚಾರ್ಯರು ಭಾಷ್ಯಗಳನ್ನು ಬರೆ ದರು. ಇಂದು ದೊರೆಯುವ ಭಾಷ್ಯಗಳಲ್ಲೆಲ್ಲ ಶಂಕರ–ಭಗತ್ಪಾದರು ರಚಿಸಿರುವ ಭಾಷ್ಯವೇ ಬಹು ಪ್ರಾಚೀನವೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ.

ಯಾವ ಭಾಷ್ಯಕಾರರೂ ಬ್ರಹ್ಮ ಸೂತ್ರಗಳಿಗೆ ತಾವು ಹೇಳುವ ಅರ್ಥವೇ ಸರಿ, ಮತ್ತೊಬ್ಬರು ಹೇಳಿದ್ದಲ್ಲ; ಎಂದು ಹಠ ಮಾಡಿಲ್ಲ. ಅವರು ನ್ಯಾಯಗಳಿಗೆ ಪ್ರಾಬಲ್ಯ ದೌರ್ಬಲ್ಯ ಪ್ರದರ್ಶನ ಪೂರ್ವಕವಾಗಿ ವೇದಾಂತಾರ್ಥ ನಿರ್ಣಯದ ವಿಷಯದಲ್ಲಿ ನ್ಯಾಯ ಸಂಚಾರ ಕ್ರಮವನ್ನು ನಿರೂಪಿಸು ತ್ತಾ, ತಮಗೆ ಅಭಿಮತವಾದ ಅರ್ಥವೇ ವೇದಾಂತ ತಾತ್ಪರ್ಯ ಎಂದು ನಿರ್ಧರಿಸಿರುತ್ತಾರೆ.

ಭಾಷ್ಯವನ್ನು ಸಾಂಪ್ರದಾಯಿಕವಾಗಿ ಅಭ್ಯಾಸ ಮಾಡಿ, ನ್ಯಾಯ ಸಂಚಾರ ಕ್ರಮವಲ್ಲಿತತ್ತ್ವ ವನ್ನು ಚೆನ್ನಾಗಿ ತಿಳಿಯ ಬಯಸುವವನು ತಾನಾಗಿ ವೇದಾಂತಗಳಲ್ಲಿ ಸ್ವಾನುಭವ, ಉಪ ಪತ್ತಿಗಳಿಂದ ಸಾಧಕ ಬಾಧಕ ನ್ಯಾಯಗಳನ್ನು ಬಳಸಿ, ತತ್ತ್ವವನ್ನು ಸ್ವಾನುಭವಕ್ಕೆ ತಂದುಕೊಂಡು ಕೃತಕೃತ್ಯ ನಾಗಲೆಂಬುದೇ ಭಾಷ್ಯಕಾರರ ಅಭಿಪ್ರಾಯ.

ಶಾಂಕರ ಭಾಷ್ಯದ ತರುವಾಯ ಲಕ್ಷ್ಮಣ ದೇಶಿಕೇಂದ್ರರು, ಆನಂದತೀರ್ಥ ಯತೀಂದ್ರರು, ಶ್ರೀಕಂಠ ಯೋಗಿಗಳ ಭಾಷ್ಯಗಳು ಪ್ರಾದುರ್ಭವಿಸಿದವು. ಬಾದರಾಯಣ ಸೂತ್ರಗಳಿಗೆ ಹಿಂದಿನ ಭಾಷ್ಯ ಕಾರರು ಮಾಡಿದ ಅರ್ಥ ನಿರ್ಣಯ ವಿಷಯದಲ್ಲಿ ತೃಪ್ತರಾಗದೆ ಕ್ರಿ. ಶ. ೧೧ನೆಯ ಶತಮಾನದ ಉತ್ತರಾರ್ಧವಲ್ಲಿದ್ದ ಶ್ರೀ ಪತಿ ಪಂಡಿತಾರಾಧ್ಯರು ಅದೇ ಬ್ರಹ್ಮ ಸೂತ್ರಗಳಿಗೆ ವ್ಯಾಖ್ಯೆಯನ್ನು ಬರೆದರು.

ಅಗಸ್ತ್ಯ ಮುನಿಚಂದ್ರೇಣ ಕೃತಾಂ ವೈಯಾಸಿಕೀಂ ಶುಭಾಮ್ ।
ಸೂತ್ರವೃತ್ತಿಂ ಸಮಾಲೋಕ್ಯ ಕೃತಂ ಭಾಷ್ಯಂ ಶಿವಂಕರಮ್ ॥

ಎಂದು ಶ್ರೀಪತಿ ಪಂಡಿತಾರಾಧ್ಯರು ಭಾಷ್ಯದ ಪ್ರಾರಂಭದಲ್ಲಿ ಬರೆದು, ತಾವು ರಚಿಸಿದ ಬ್ರಹ್ಮ ಸೂತ್ರ ವಿವರಣವು ಅಗಸ್ತ್ಯ ವೃತ್ತಿಗೆ ಅನುಸಾರವಾಗಿದೆಯೆಂದೂ, ತಮ್ಮ ಸಿದ್ಧಾಂತವು ಪರಮ ಮಾಹೇಶ್ವರ ಅಗಸ್ತ್ಯಾದಿ ಮಹರ್ಷಿ ಸಂಪ್ರದಾಯದಿಂದ ಬಂದುದೆಂದೂ ಹೇಳಿ, ತಾವು ರಚಿಸಿದ ಸೂತ್ರಾರ್ಥ ವಿವರಣವು ಸ್ವಕಪೋಲಕಲ್ಪಿತ ಎಂಬ ಅಪವಾದವನ್ನು ಹೋಗಲಾಡಿಸಿ ಕೊಂಡಿದ್ದಾಗೆ. ಈ ಭಾಷ್ಯವು ಇತರ ಭಾಷ್ಯಗಳಿಗಿಂತಲೂ ವಿಸ್ತಾರವಾದದ್ದು. ಇಲ್ಲಿ ನಿರೀಕ್ಷಿಸಬಹುದಾದ ಎಲ್ಲ ಆಕ್ಷೇಪಗಳನ್ನು ನಿರಾಕರಣ ಮಾಡಿ ಭಾಷ್ಯಕಾರರು ಸೂತ್ರಾರ್ಥವನ್ನು ನಿರ್ಣಯಿಸುತ್ತಾ 'ವಿಶೇಷಾದ್ವೈತ' ವನ್ನು ಸ್ಥಾಪಿಸಿದ್ದಾರೆ ಎಂಬುದು ಭಾಷ್ಯ ಪರಿಶೀಲನೆಯಿಂದ ವೇದ್ಯವಾಗುತ್ತದೆ.

ವಿಶೇಷಾದ್ವೈತವೇ ಶಕ್ತಿವಿಶಿಷ್ಟಾದ್ವೈತ, ಶಿವಾದ್ವೈತ ಮತ್ತು ವಿಶಿಷ್ಟಾದ್ವೈತ ಎಂದು ಕರೆಯಲ್ಪಟ್ಟಿದೆ.

ಈ ಭಾಷ್ಯವು ಹಿಂದೆ ಮುದ್ರಿತವಾಗಿದ್ದರೂ ಕೂಡ ಅದು ಇಂದು ಉಪಲಭ್ಯವಿಲ್ಲ. ಬೇರೆ ಬೇರೆ ಪ್ರಾಂತ್ಯಗಳಲ್ಲಿ ಮುದ್ರಿತ–ಅಮುದ್ರಿತವಾಗಿದ್ದ ಅನೇಕ ಮಾತೃಕಾ ಕೋಶಗಳ ಸಹಾಯದಿಂದ ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿರುವ ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆಯು ಇದನ್ನು ಮತ್ತೆ ಮುದ್ರಿಸಿ ಪ್ರಕಟಿಸುತ್ತಿರುವುದು ಸಂತೋಷ

ಈ ಭಾಷ್ಯ ಪರಿಷ್ಕರಣದಲ್ಲಿ ಮೈಸೂರು ಮಹಾರಾಜ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಪ್ರಾಧ್ಯಾಪಕ ಪದವಿಯಿಂದ ನಿವೃತ್ತರಾಗಿರುವ ಮಹಾರಾಜರ ಆಸ್ಥಾನದ ವಿದ್ವಾಂಸರಾದ ಶ್ರೀ ನಂಜುಂಡಾರಾಧ್ಯರು ನಿಯುಕ್ತರಾಗಿದ್ದಾರೆ. ಇವರು ವಿಶೇಷಾದ್ವೈತ ಸಿದ್ಧಾಂತದಲ್ಲಿ ಅಧೀತಿ–ಬೋಧ–ಆಚರಣ–ಪ್ರಚಾರಗಳನ್ನು ಮಾಡಿ, ನಿಷ್ಕೃಷ್ಟ ಪರಿಜ್ಞಾನವುಳ್ಳವರು. ಸಂಸ್ಕೃತ ಮತ್ತು ಕರ್ಣಾಟಕ ಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ರಚಿಸಿ, ವೀರಶೈವರಿಗೂ ಮತ್ತು ಬೇರೆಯವರಿಗೂ ಸುಪರಿಚಿತರು. ಈ ಭಾಷ್ಯಕ್ಕೆ ಶ್ರೀ ನಂಜುಂಡಾರಾಧ್ಯರು ವಿಸ್ತೃತವೂ ಪ್ರಬಂಧರೂಪವೂ ಆದ ಭೂಮಿಕೆಯನ್ನು ಬರೆದು ಪ್ರಕೃತ ಭಾಷ್ಯವು ಹಿಂದಿನ ಭಾಷ್ಯಗಳಿಗಿಂತ ವಿಲಕ್ಷಣವೂ ವಿಷಯ ವೈಶಿಷ್ಟ್ಯವುಳ್ಳದ್ದೂ ಆಗಿದೆಯೆಂದು ಹೇಳಿ, ಅದನ್ನು ಪ್ರಮಾಣ ಮತ್ತು ಉದಾಹರಣ ಪೂರ್ವಕವಾಗಿ ವಿವರಿಸಿರುತ್ತಾರೆ. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಮುಂತಾದ ವೀರಶೈವ ಸಿದ್ಧಾಂತಗಳಿಗೆ ಈ ಭೂಮಿಕೆ ದರ್ಪಣದಂತಿದೆ. ಇದು ಕೇವಲ ವೀರಶೈವ ಮತವನ್ನು ತಿಳಿಯ ಬಯಸುವವರಿಗೆ ಮಾತ್ರವಲ್ಲದೆ ಇತರ ತತ್ತ್ವ ವಿವೇಚಕರಿಗೂ ಶೈವ ಮತವನ್ನು ಅರಿಯುವಲ್ಲಿ ನೆರವಾಗುತ್ತದೆ. ಪರಿಷ್ಕೃತವಾದ ಈ ಭಾಷ್ಯಕ್ಕೆ ಇದು ಭೂಷಣಪ್ರಾಯವಾಗಿದೆ. ಶ್ರೀ ಎಂ ಜಿ. ನಂಜುಂಡಾರಾಧ್ಯರ ಪ್ರಯತ್ನವು ಪ್ರಶಂಸನೀಯ. ಪ್ರಾಚ್ಯ ವಿದ್ಯಾ ಸಂಶೋಧನಾಲಯ ನಿರ್ದೇಶಕರಾದ ವಿದ್ವಾನ್ ಡಾ॥ ಮರುಳ ಸಿದ್ಧಯ್ಯನವರ ಪರಿಷ್ಕೃತ ಪ್ರಾಚೀನ ಗ್ರಂಥ ಮುದ್ರಣ ಪ್ರಯತ್ನವು ಸಫಲವಾಗಲೆಂದು ಆಶಿಸುತ್ತೇನೆ.

೧–೧೨–೭೭.
ಬೆಂಗಳೂರು.

ವಿದ್ವಜ್ಜನ ವಿಧೇಯ.
ವೈ ಸು. ರಾಮಚಂದ್ರ ಶಾಸ್ತ್ರೀ.

೨

## ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯ, ವಾರಾಣಸಿ,

ಶ್ರೀಯುತ ಪಂಡಿತಪ್ರವರ ಶ್ರೀ ಎಂ. ಜಿ. ನಂಜುಂಡಾರಾಧ್ಯ ಮಹೋದಯರಿಂದ ಸಂಪಾದಿಸಲ್ಪಟ್ಟು ಮೈಸೂರು ವಿಶ್ವವಿದ್ಯಾಲಯ ಪ್ರಾಚ್ಯ ವಿದ್ಯಾಸಂಶೋಧನಾಲಯದ ಆಶ್ರಯದಲ್ಲಿ ಪ್ರಕಾಶಿತವಾಗಿರುವ ಶ್ರೀಕರ ಭಾಷ್ಯದ ಪ್ರಥಮ ಸಂಪುಟವನ್ನು ಸಾವಧಾನವಾಗಿ ಅವಲೋಕಿಸಿದ್ದೇನೆ. ಶ್ರೀಕರ ಭಾಷ್ಯದ ಮಹತ್ವವನ್ನು ಅರಿಯದವರಾರು ? ಈ ಸಂಪಾದನದಿಂದ ಅದರ ಮಹತ್ವವು ನೂರ್ಮಡಿ ವಿಖ್ಯಾತ ವಾಯಿತು. ಸಂಪಾದಕ ಮಹೋದಯರು ಈ ಗ್ರಂಥಕ್ಕೆ ವಿಸ್ತೃತವೂ ಗಂಭೀರವೂ ಎಲ್ಲ ಆಗಮಿಕ ಮತ್ತು ದಾರ್ಶನಿಕ ವಿಷಯಗಳನ್ನು ಒಳಗೊಂಡಿರುವ ಎರಡು ನೂರು ಪುಟಗಳಿಗೂ ಮೀರಿದ ಭೂಮಿಕೆ ಯನ್ನು ಗ್ರಂಥದ ಪ್ರಾರಂಭದಲ್ಲಿಯೂ ಕೆಲವು ಅಗತ್ಯವಾದ ಅನುಬಂಧಗಳನ್ನು ಕಡೆಯಲ್ಲಿಯೂ ಕೊಟ್ಟು ಮಹೋಪಕಾರ ಮಾಡಿದ್ದಾರೆ. ಶ್ರೀಕರ ಭಾಷ್ಯವು ವೀರಶೈವ ಸಂಪ್ರದಾಯಕ್ಕೆ ಜೀವಾತು ಭೂತವಾದುದಲ್ಲವೆ ? ವೇದಾದಿಶಾಸ್ತ್ರ ಪರಂಪರೆಯಲ್ಲಿ ಈ ಸಂಪ್ರದಾಯವು ಹೇಗೆ ವಿಕಾಸವನ್ನು ಪಡೆಯಿತು ಎಂಬುದನ್ನು ವಿದ್ವಾಂಸರಾದ ಸಂಪಾದಕರು ಚೆನ್ನಾಗಿ ಪರಿಶ್ರಮಿಸಿ ವಿವರಿಸಿದ್ದಾರೆ. ಅಪ ಶೂದ್ರಾಧಿಕರಣಕ್ಕೆ ಆಗಮ ಸಮ್ಮತವಾದ ವ್ಯಾಖ್ಯೆಯನ್ನು ಅಂಗೀಕರಿಸಿ ವಿವಿಧ ಶೈವಾಗಮ ಶಾಖೆಗಳ, ಆಯಾ ಗ್ರಂಥಗಳ ಸಿದ್ಧಾಂತಗಳನ್ನು ತುಲನಾತ್ಮಕ ಪದ್ಧತಿಯಿಂದ ಪರಿಚಯಿಸಿ ಅವುಗಳ ವೈಶಿಷ್ಟ್ಯವನ್ನು ಇಲ್ಲಿ ಪ್ರಕಾಶ ಪಡಿಸಲಾಗಿದೆ. ಮೈಸೂರು ಶ್ರೀಮನ್ಮಹಾರಾಜ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ ಪ್ರಧಾನಾಧ್ಯಾಪಕರಾದ ಮಾನ್ಯ ಸಂಪಾದಕ ಮಹಾಶಯರು ತಾವು ಆರ್ಜಿಸಿದ ಜ್ಞಾನ ಮತ್ತು ಪ್ರತಿಭೆಗಳನ್ನು ಅತ್ಯುನ್ನತ ಉತ್ಕರ್ಷೆಯನ್ನು ಇಲ್ಲಿ ಪ್ರದರ್ಶಿಸಿ ಅಭಿನಂದ್ಯ ರಾಗಿರುವುದು ಭಾರತೀಯ ದರ್ಶನಾಭಿರುಚಿಯುಳ್ಳವರಿಗೆ ಮತ್ತು ಓದುಗರಿಗೆ ಒಂದು ಹೆಮ್ಮೆ ಎಂದು ಹೇಳಿ ವಿರಮಿಸಲಾಗುತ್ತದೆ.

ವಜ್ರವಲ್ಲಭ ದ್ವಿವೇದಿ

೧೬–೧೨–೭೭ ಯೋಗತಂತ್ರ, ವಿಭಾಗ ಪ್ರಾಧ್ಯಾಪಕ

೩

## ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯ, ವಾರಾಣಸೀ

ಶಕ್ತಿ ವಿಶಿಷ್ಟಾದ್ವೈತವು ವೇದಾಗಮ ಸಮ್ಮತ ಮತ್ತು ಪ್ರಾಚೀನ. ಬ್ರಹ್ಮಸೂತ್ರಗಳ ಮೇಲೆ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ ಪರವಾಗಿ ರೇಣುಕ ಭಗವತ್ಪಾದ, ನೀಲಕಂಠ ಮುಂತಾದವರು ಭಾಷ್ಯ ಗಳನ್ನು ಬರೆದಿದ್ದಾರೆ. ಅವರಲ್ಲಿ ವಿಶೇಷಾದ್ವೈತವೆಂಬ ಪರ್ಯಾಯನಾಮದಿಂದ ಶಕ್ತಿವಿಶಿಷ್ಟಾದ್ವೈತ ಪ್ರತಿಪಾದಕವಾದ ಶ್ರೀಕರಭಾಷ್ಯವನ್ನು ರಚಿಸಿದವರು ಶ್ರೀಪತಿ ಪಂಡಿತಾರಾಧ್ಯ ಭಗವತ್ಪಾದರು. ಶ್ರೀಕರಭಾಷ್ಯವು ಈ ಮುಂಚೆ ದಿ|| ಸಿ. ಹಯವದನರಾವ್ ಮಹೋದಯರಿಂದ ದೇವನಾಗರೀ ಲಿಪಿ ಯಲ್ಲಿ ಮುದ್ರಿತವಾಗಿತ್ತು. ಆದರೆ ಆ ಸಂಸ್ಕರಣದಲ್ಲಿ ಬಹು ವಿಧವಾದ ದೋಷಗಳಿದ್ದವು. ಆದ್ದರಿಂದಲೇ ಆ ಗ್ರಂಥವನ್ನು ಮತ್ತೆ ಪರಿಷ್ಕರಿಸಿ, ಸಂಶೋಧಿಸಿ ಪ್ರಕಟಿಸುವ ಅಗತ್ಯವಿತ್ತು. ಈ ಕಾರ್ಯವು ಶಿವ ಕೃಪೆಯಿಂದ ವಿದ್ವದ್ವರ್ಯರಾದ ಪಂಡಿತ ಎಂ. ಜಿ. ನಂಜುಂಡಾರಾಧ್ಯರಿಂದ ವಿದ್ವತ್ತಾಪೂರ್ಣವೂ ಅನುಸಂಧಾನಾತ್ಮಕವೂ ಆದ ಭೂಮಿಕೆಯೊಡನೆ ಪರಿಷ್ಕರಣ ಕಾರ್ಯವು ಚೆನ್ನಾಗಿ ನೆರವೇರಿಸಲ್ಪಟ್ಟಿತು.

ಪ್ರಾಚ್ಯ ಸಂಶೋಧನ ಸಂಸ್ಥೆಯ ಆಶ್ರಯದಲ್ಲಿ ಮುದ್ರಿತವಾದ ಈಗ್ರಂಥವನ್ನು ಭೂಮಿಕೆಯೊಡನೆ ಸಾಂಗವಾಗಿ ಅವಲೋಕಿಸಲಾಯಿತು. ಪಂಡಿತ ಪ್ರವರರು ಪ್ರಾಚ್ಯ ಪೌರಸ್ತ್ಯ ಪದ್ಧತಿಯಂತೆ ವೀರಶೈವಸಿದ್ಧಾಂತವು ಹೇಗೆ ವೇದಾಗಮ ಸಮ್ಮತವಾಯಿತು ಎಂಬುದನ್ನು ಇಲ್ಲಿ ಚನ್ನಾಗಿ ಪ್ರತಿಪಾದಿಸಿದ್ದಾರೆ. ಕಾಪಾಲಿಕ ಮತ್ತು ಕಾಳಾಮುಖಾದಿ ಮತಗಳೂ ಸಹ ಇಲ್ಲಿ ಪ್ರತಿಪಾದಿತವಾಗಿವೆ. ಜೊತೆಗೆ ದಕ್ಷಿಣ ದೇಶದ ಸ್ವತಂತ್ರ ಶಿವಾದ್ವೈತದರ್ಶನದ ಗುರು ಪರಂಪರೆಯೂ ಕೂಡ ಸೂಚಿತವಾಗಿದೆ. ಸಂಗ್ರಾಹಕರು ಬಹುಕಾಲದ ವರೆಗೆ ಈ ಸಿದ್ಧಾಂತವನ್ನು ಆಳವಾಗಿ ಅಭ್ಯಸಿಸಿ ಪಠನ–ಪಾಠನಗಳನ್ನು ನಡೆಸಿದ ಫಲವಾಗಿ ಹಾಗೂ ಅವರ ಪ್ರತಿಭೆಯ ಬಲದಿಂದ ಅನೇಕ ರಹಸ್ಯ ವಿಷಯಗಳು ಇಲ್ಲಿ ಉದ್ಧೃತವಾಗಿವೆ. ಮೇಲಾಗಿ ಕನ್ನಡದಲ್ಲಿ ಪ್ರತಿಪಾದಿತವಾಗಿರುವ ವಚನಶಾಸ್ತ್ರದ ಸಹಾಯದಿಂದ ಈ ಸಿದ್ಧಾಂತವು ಸ್ಥಿರೀಕರಿಸಲ್ಪಟ್ಟದೆ. ವೀರಶೈವ ಸಿದ್ಧಾಂತ ಪ್ರಕ್ರಿಯೆಯು ಇಲ್ಲಿ ಸಂಗ್ರಹಿಸಲ್ಪಟ್ಟಿದೆ. ವೀರಶೈವದರ್ಶನ ಮತ್ತು ಬೇರೆ ದರ್ಶನಗಳಿಗೆ ಇರುವ ವೈಶಿಷ್ಟ್ಯವನ್ನು ತುಲನಾತ್ಮಕ ದೃಷ್ಟಿಯಿಂದ ಪ್ರತಿಪಾದಿಸಲಾಗಿದೆ. ಈ ಗ್ರಂಥವು ಎಲ್ಲ ಪಂಡಿತರಿಗೆ, ಅನುಸಂಧಾನ ಮಾಡುವವರಿಗೆ ಮತ್ತು ತತ್ತ್ವವನ್ನು ತಿಳಿಯಬಯಸುವವರಿಗೆ ತುಂಬಾ ಉಪಕಾರಕವಾಗುತ್ತದೆ ಎಂದು ಭಾವಿಸುತ್ತೇನೆ.

ಡಾ|| ಎಸ್.ಎಚ್. ಚಂದ್ರಶೇಖರಸ್ವಾಮಿ

೧೯–೧೨–೭೭ ಳ ಯೋಗತಂತ್ರ ವಿಭಾಗ

ಶಿವಾದ್ವೈತ ಸಿದ್ಧಾಂತರತ್ನ, ಶಿವಸಿದ್ಧಾಂತರತ್ನ, ಶಿವತತ್ತ್ವರತ್ನಾಕರ, ಶಿವಸಿದ್ಧಾಂತ ಶಿರೋಮಣಿ, ಶರಣಧರ್ಮಭಾಸ್ಕರ, ದರ್ಶನವಿಶಾರದ, ಸಾವಧಾನ ಸಂಪಾದಕ
ಶ್ರೀ ಪಂ|| ನಾಗಭೂಷಣಶಾಸ್ತ್ರಿಗಳು, ಶಾಸ್ತ್ರೀಮಠ, ಸಂಗನಾಳ ಮು|| ಧಾರವಾಡ.

ಪುಣ್ಯತಮವಾದ ನಮ್ಮ ಭರತಖಂಡದಲ್ಲಿ ಶ್ರೀ ಶಂಕರಾಚಾರ್ಯರೇ ಮೊದಲಾದವರಿಂದ ಬ್ರಹ್ಮಸೂತ್ರಗಳ ಮೇಲೆ ಅದ್ವೈತಾದಿ ಪರವಾದ ಭಾಷ್ಯಗಳು ರಚಿತವಾಗಿರುವುದು ಎಲ್ಲರಿಗೂ ತಿಳಿದ ವಿಷಯ. ಅಲ್ಲಿ ಶಕ್ತಿವಿಶಿಷ್ಟಾದ್ವೈತ ಪರವಾಗಿ ಒಂದು ಭಾಷ್ಯವು ಸಂಪೂರ್ಣವಾಗಿ ತನ್ನ ವೈಶಿಷ್ಟ್ಯವನ್ನುಹೊಂದಿದೆ.

ನೀಲಕಂಠ ಶಿವಾಚಾರ್ಯರು ಬ್ರಹ್ಮ ಸೂತ್ರಗಳ ಮೇಲೆ ಬರೆದ ಶಕ್ತಿವಿಶಿಷ್ಟಾದ್ವೈತ ಪರವಾದ ಭಾಷ್ಯವು ಇಂದು ಕೂಡ ದೊರೆಯುತ್ತಿಲ್ಲ. ಆದರೆ ಆ ಭಾಷ್ಯವನ್ನು ಅಧಿಕರಿಸಿ ರಚಿತವಾದ ಕ್ರಿಯಾಸಾರವೆಂಬ ಗ್ರಂಥವು ಮಾತ್ರ ದೊರೆತಿದೆ.

ಶ್ರೀಪತಿಪಂಡಿತರು ಬ್ರಹ್ಮಸೂತ್ರಗಳ ಮೇಲೆ ರಚಿಸಿದ ಶಕ್ತಿ ವಿಶಿಷ್ಟಾದ್ವೈತಪರವಾದ ಭಾಷ್ಯವು ಶಂಕರಾಚಾರ್ಯಸಮ್ಮತವಾದ ಅದ್ವೈತಕ್ಕಿಂತ ಬೇರೆ ಎಂಬ ವಿಷಯದಲ್ಲಿ ಲೇಶವೂ ಸಂದೇಹವಿಲ್ಲ. ಆದರೂ ಕೆಲವರು ಎರಡೂ ಸಿದ್ಧಾಂತಗಳು ಒಂದೇ ಎಂದು ಹೇಳುತ್ತಾರೆ. ಅದಕ್ಕೇನು ಕಾರಣವೊ ತಿಳಿಯದು. ಬ್ರಹ್ಮಾದ್ವೈತದಲ್ಲಿ ಜಗನ್ಮಿಥ್ಯಾತ್ವ, ಬ್ರಹ್ಮನಿಗೆ ನಿರ್ವಿಶೇಷತ್ವ ಮತ್ತು ಜ್ಞಾನದಿಂದಲೇ ಕೈವಲ್ಯ ಎಂಬದು ಶಾಂಕರಾದ್ವೈತದಲ್ಲಿ ಸುಪ್ರಸಿದ್ಧ. ಶಕ್ತಿ ವಿಶಿಷ್ಟಾದ್ವೈತದಲ್ಲಿ ಇದಿಷ್ಟೂ ಬೇರೆಯೆ ಎಂಬುದನ್ನು ಆಚಾರ್ಯ ಶ್ರೀಪತಿ ಪಂಡಿತರು ತಮ್ಮ ಶ್ರೀಕರ ಭಾಷ್ಯದಲ್ಲಿ ಚನ್ನಾಗಿ ಪ್ರತಿಪಾದಿಸಿದ್ದಾರೆ.

ಇಂಥ ಭಾಷ್ಯ ಗ್ರಂಥದ ಸಂಪಾದನ ಮಹಾಕಾರ್ಯದಲ್ಲಿ ಕೃತ ಪರಿಶ್ರಮರಾದ ಪಂಡಿತ ಪ್ರವರ ಶ್ರೀ ನಂಜುಂಡಾರಾಧ್ಯ ಮಹೋದಯರು ತತ್ತ್ವವನ್ನು ತಿಳಿಯ ಬಯಸುವ ಪಂಡಿತರ ಅಭಿನಂದನೆಗೆ ಅರ್ಹರು. ಅದರಂತೆ ಈ ಗ್ರಂಥವನ್ನು ಇಂಥ ಪಂಡಿತರಿಂದ ಪರಿಷ್ಕರಿಸಿ ಪ್ರಕಟಿಸಿದ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳು ಅಭಿನಂದ್ಯರು.

೩೧–೧೨–೭೮

ವಿದ್ವದ್ವಿಧೇಯ
ನಾಗಭೂಷಣಶಾಸ್ತ್ರೀ

ಕಳಾಪ್ರಪೂರ್ಣ
ನಿಡುದವೋಲು ವೆಂಕಟರಾವ್. ಎಂ. ಎ.
ನಿವೃತ್ತ ತೆಲಗು ವಿಭಾಗದ ಮುಖ್ಯರು, ಮದರಾಸು, ವಿಶ್ವವಿದ್ಯಾಲಯ
ಆಂಧ್ರಸಾಹಿತ್ಯ ಅಕಾಡೆಮಿಯ ಸದಸ್ಯರು

(ಆಂದ್ರಭಾಷೆಯ ಮೂಲದ ಕನ್ನಡ ಭಾಷಾಂತರ)

ಸವ್ಯೆದಿಕ ಆರಾಧ್ಯ ಸಂಪ್ರದಾಯಕ್ಕೆ ಪರಮ ಪ್ರಮಾಣವೆನಿಸಿದ ಗ್ರಂಥಗಳಲ್ಲಿ ಶ್ರೀಪತಿ ಪಂಡಿತ ವಿರಚಿತ ಶ್ರೀಕರಭಾಷ್ಯವು ಪ್ರಧಾನವಾದುದು. ಈ ಗ್ರಂಥವು ಹಿಂದೆ ಸಿ. ಹಯವದನರಾಯರಿಂದ ಮುದ್ರಿತವಾಗಿ ಬೃಹದಾಂಗ್ಲ ಪೀಠಿಕೆಯೊಡನೆ ಹೊರಬಂದಿದೆ. ಆದರೆ ಆ ಗ್ರಂಥದಿಂದ ಶ್ರೀಪತಿ ಪಂಡಿತನು ಪ್ರತಿಪಾದಿಸಿದ ಶಿವಾದ್ವೈತ ಸಿದ್ಧಾಂತಕ್ಕೇ ಭಂಗವುಂಟಾಗಿದೆ. ಅಲ್ಲಿ ಈ ಗ್ರಂಥವು ಮಧ್ವಾಚಾರ್ಯರ ದ್ವೈತಸಂಪ್ರದಾಯದ ತರುವಾಯ ರಚಿತವಾದುದೆಂದು ನಿರೂಪಿತವಾಗಿದೆ. ಶ್ರೀಪತಿ ಪಂಡಿತನ ಕಾಲವನ್ನು ಕುರಿತು ಕ್ರಿ.ಶ. ೧೪೦೦ ಪ್ರಾಂತವೆಂದು ಕೂಡ ನಿರ್ಣಯಿಸಲಾಗಿದೆ. ಇದರಿಂದ ಶೈವಮತಸಾಹಿತ್ಯ ಪ್ರಪಂಚವು ಶ್ರೀಕರಭಾಷ್ಯವನ್ನು ಕುರಿತು ತತ್ಕರ್ತೃ ಶ್ರೀಪತಿ ಪಂಡಿತನನ್ನು ಕುರಿತು ಅಜ್ಞಾನಾಂಧಕಾರದಲ್ಲಿ ಮುಳುಗಿದೆ.

ಇಂಥ ಪರಿಸ್ಥಿತಿಯಲ್ಲಿ ಶ್ರೀಕರ ಭಾಷ್ಯವನ್ನು ಆವರಿಸಿದ ತಿಮಿರವನ್ನು ಆಮೂಲಾಗ್ರವಾಗಿ ಭೇದಿಸಿ ಆ ಭಾಷ್ಯಕ್ಕೆ ಸಹಸ್ರಮುಖ ಸೂರ್ಯೋದಯವನ್ನು ಪ್ರಸಾದಿಸಿ ಬೆಳಗಿಸಿದವರು ಶಿವ ಶ್ರೀ ನಂಜುಂಡಾರಾಧ್ಯರವರು ಅವರು ಈ ಗ್ರಂಥವನ್ನು ಸಾಂಗವಾಗಿ, ಸರ್ವತೋಮುಖವಾಗಿ, ಸಂಶೋಧಿಸಿ, ಅದರ ಪ್ರಥಮ ಸಂಪುಟವನ್ನು ಇಂದು ಪ್ರಕಟಿಸಿದ್ದಾರೆ. ಈ ಗ್ರಂಥಕ್ಕೆ ೩೧೦ ಪುಟಗಳ ಒಂದು ಭೂಮಿಕೆಯಿದೆ. ಇದರಲ್ಲಿ ವೇದ ವೇದಾಂತಾಗಮೋಪನಿಷದ್ದರ್ಶನಗಳ ಆಧಾರಗಳೊಡನೆ ರಾಮಾನುಜ, ಮಧ್ವಾಚಾರ್ಯ ಸಂಪ್ರದಾಯಗಳು ಪರಾಮೃಷ್ಟವಾಗಿವೆ. ವೀರಶೈವ ವಿಶೇಷ ಸಾಂಪ್ರದಾಯಿಕವಾದ ಶಕ್ತಿವಿಶಿಷ್ಟಾದ್ವೈತವೇ ಪ್ರಾಚೀನವೆಂದು ಸೋಪಪತ್ತಿಕವಾಗಿ ನಿರ್ಣಯಿಸಲ್ಪಟ್ಟಿದೆ. ವೀರಶೈವಮತ ಸಿದ್ಧಾಂತಗಳೆಲ್ಲವೂ ವಿವರಿಸಲ್ಪಟ್ಟಿವೆ. ಶ್ರೀಪತಿ ಪಂಡಿತನ ಕಾಲವು ಕ್ರಿ. ಶ. ೧೧೦೦ಕ್ಕಿಂತ ಹಿಂದೆ ಎಂದು ಸ್ಪಷ್ಟೀಕೃತವಾಗಿದೆ. ನೂತನ ವಿಷಯಗಳೆಷ್ಟೋ ಬಹಿರ್ಗತವಾಗಿವೆ. ಈ ಭೂಮಿಕೆಯನ್ನು ರಚಿಸಲು ಶ್ರೀ ನಂಜುಂಡಾರಾಧ್ಯರು ಸಂಸ್ಕೃತ–ಕನ್ನಡ–ಆಂಗ್ಲ–ಭಾಷೆಗಳಲ್ಲಿ ವೀರಶೈವ ಮತಕ್ಕೆ ಸಂಬಂಧಿಸಿದ ನೂರಎಂಟು ಗ್ರಂಥಗಳನ್ನು ಸಂಪ್ರತಿಸಿದ್ದಾರೆ. ಅವೆಲ್ಲವುಗಳನ್ನು ಕೂಲಂಕಷವಾಗಿ ಅವಲೋಕಿಸಿದ್ದಾರೆ. ಈ ಭೂಮಿಕೆಯು ವೀರಶೈವಭಾಷ್ಯ ಸರ್ವಸ್ವ.

ಈ ಭೂಮಿಕೆ ರಚನೆಯಿಂದ ಗ್ರಂಥ ಸಂಪಾದಕತ್ವದಲ್ಲಿ ಶ್ರೀನಂಜುಂಡಾರಾಧ್ಯರು ಪ್ರದರ್ಶಿಸಿದ ವೈದುಷ್ಯವು ಅಪ್ರತಿಮಾನ, ಅಮೇಯ. ಈ ಕಾಲದಲ್ಲಿ ಇಂಥ ಮಹಾಗ್ರಂಥದ ಸಂಪಾದಕತ್ವವನ್ನು ವಹಿಸುವುದಕ್ಕೆ ಶಕ್ತಿವಿಶಿಷ್ಟಾದ್ವೈತ ಸಂಪ್ರದಾಯ ಪಾರಾವಾರ ಪಾರೀಣರೂ, ಶೈವಾಗಮ ವಿಶಾರದರೂ, ಸವ್ಯೆದಿಕ ವೀರಶೈವದರ್ಶನಾಚಾರ್ಯರೂ ಆದ ಶ್ರೀ ನಂಜುಂಡಾರಾಧ್ಯರಿಗಿಂತ ಅಧಿಕಾರವುಳ್ಳವರು ಮತ್ತೆಯಾರೂ ಇಲ್ಲವೆಂದು ಬಿನ್ನೈಸುತ್ತೇನೆ.

ಅವರು ಬೇಗನೆ ಈ ಮಹಾ ಗ್ರಂಥದ ದ್ವಿತೀಯ ಸಂಪುಟವನ್ನು ಪ್ರಕಟಿಸುವಂತಾಗಲಿ

ಇತಿಶಿವಮ್

೨-೮-೭೭ ನಿಡುದವೋಲು ವೆಂಕಟರಾವ್
ಹೈದರಾಬಾದ್

೬

ಡಾ. ಕೆ. ಬಿ. ರಾಮಕೃಷ್ಣರಾವ್.
ಪ್ರಾಧ್ಯಾಪಕ.

ತತ್ತ್ವಶಾಸ್ತ್ರ ವಿಭಾಗ
ಮೈಸೂರು ವಿಶ್ವ ವಿದ್ಯಾನಿಲಯ

ಬ್ರಹ್ಮಸೂತ್ರಗಳ ಮೇಲಿನ 'ಶ್ರೀಕರಭಾಷ್ಯ'ವು ಶ್ರೀಪತಿಪಂಡಿತಾಚಾರ್ಯರಿಂದ ವಿರಚಿತವಾದದ್ದು. ವೀರಶೈವ ಸಿದ್ಧಾಂತ ಪ್ರತಿಪಾದಕವಾದದ್ದು. ಈ ಸಿದ್ಧಾಂತವನ್ನು 'ವಿಶೇಷಾದ್ವೈತ' ವೆಂಬ ಅಭಿಧಾನದಿಂದ ಭಾಷ್ಯಕಾರರು ಪ್ರಸ್ತುತ ಪಡಿಸಿದ್ದಾರೆ. ಇದೀಗ ಎರಡು ಸಂಪುಟಗಳಲ್ಲಿ ಆಸ್ಥಾನ ವಿದ್ವಾನ್ ಶ್ರೀ ನಂಜುಂಡಾರಾಧ್ಯರಿಂದ ಪರಿಶೋಧಿತಗೊಂಡು ಸಂಪಾದಿತವಾಗಿ ಮೈಸೂರು ವಿಶ್ವ ವಿದ್ಯಾನಿಲಯದ ಪ್ರಾಚ್ಯ ಸಂಶೋಧನಾ ಸಂಸ್ಥೆಯ ಮೂಲಕ ಪ್ರಕಟವಾಗುತ್ತಿದೆ. ಈ ಮೊದಲೇ ಶ್ರೀಕರ ಭಾಷ್ಯವು ಸಂಸ್ಕೃತದಲ್ಲೂ (1935) ಕನ್ನಡದಲ್ಲೂ (1962) ಪ್ರಕಟವಾಗಿದ್ದರೂ, ಇಂದಿನ ಪ್ರಕಟಣೆ ಹಲವು ಕಾರಣಗಳಿಂದ ಆದರಣೀಯವಾಗಿದೆ.

ಮೊದಲನೆಯದಾಗಿ, ಇದುವರೆಗೆ ಶ್ರೀಕರ ಭಾಷ್ಯದ ಮೇಲೆ ಸಂಸ್ಕೃತ, ಕನ್ನಡ ಹಾಗೂ ಆಂಗ್ಲ ಭಾಷೆಯಲ್ಲಿ ಮುದ್ರಿತವಾದ ಎಲ್ಲ ಲೇಖನ ಮತ್ತು ಗ್ರಂಥಗಳ ವಿಚಾರ ದೃಷ್ಟಿಗಳನ್ನೂ ಗ್ರಂಥದ ಪಾಠಾಂತರಗಳನ್ನೂ ಗಮನಿಸಿ, ಅಗತ್ಯವಾದ ತನ್ನದೇ ಆದ ನಿಲುವನ್ನು ಇದು ತಾಳಿದೆ.

ಎರಡನೆಯದಾಗಿ, ವೀರಶೈವ ಸಿದ್ಧಾಂತವು ಸಮಸ್ತ ಭಾರತೀಯ ತತ್ತ್ವ ಶಾಸ್ತ್ರದ ಹಿನ್ನೆಲೆಯಲ್ಲಿ ಹೇಗೆ ರೂಪುಗೊಂಡಿದೆ ಎನ್ನುವುದನ್ನು ತೋರಿಸುವುದಕ್ಕೆ ವಿಸ್ತಾರವಾದ ಭೂಮಿಕೆಯನ್ನು ಒಳಗೊಂಡಿದೆ. ಇದರಲ್ಲಿ ವೇದ, ಆಗಮ, ಪುರಾಣ ವಾಙ್ಮಯಗಳ ಬೆಳಕಿನಲ್ಲಿ ಶೈವ ದರ್ಶನದ ಗಮನಾರ್ಹ ಪ್ರಭೇದಗಳನ್ನು (ಶೈವದ್ವೈತ, ಶೈವಾದ್ವೈತ, ಶೈವದ್ವೈತಾದ್ವೈತ) ವಿಮರ್ಶಿಸಿ, ಶೈವ ವಿಶೇಷಾದ್ವೈತಾಭಿಧಾನದ ಶಕ್ತಿವಿಶಿಷ್ಟಾದ್ವೈತವನ್ನು ವಿಸ್ತಾರವಾಗಿ ನಿರೂಪಿಸಲಾಗಿದೆ. ಶೈವ ಸಂಪ್ರದಾಯದಲ್ಲಿ ಶ್ರೀಕರ ಭಾಷ್ಯದ ಸ್ಥಾನ, ಭಾಷ್ಯಕಾರರ ಕಾಲ ಮತ್ತು ಸ್ಥಳ ಮುಂತಾದವುಗಳನ್ನು ಚರ್ಚಿಸಿ, ವಿಚಾರ ಹರಿದು ಬಂದ ದಾರಿಯನ್ನು ಎತ್ತಿ ತೋರಿಸಲಾಗಿದೆ. ಆರು ಅನುಬಂಧಗಳನ್ನು ಒಳಗೊಂಡು ಸಂಶೋಧಕರಿಗೆ ಅನುಕೂಲವಾಗಿದೆ. ಶ್ರೀ ನಂಜುಂಡಾರಾಧ್ಯರು ನೀಡಿರುವ ಭೂಮಿಕೆಯೇ ಒಂದು ಸ್ವತಂತ್ರ ಗ್ರಂಥವಾಗಬಹುದಾಗಿದೆ. ವಿದ್ಯಾರ್ಥಿಗಳಿಗೆ ಹೇಗೋ ಹಾಗೆಯೇ ವಿದ್ವಾಂಸರಿಗೂ, ಧರ್ಮಾನುಯಾಯಿಗಳಿಗೂ ಉಪಯುಕ್ತವಾದಂತಹ ಒಂದು ಕೈಪಿಡಿಯಾಗಿದೆ. ಸ್ವತಃ ವೀರಶೈವ ಧರ್ಮದಲ್ಲಿ ಅನುಷ್ಠಾನಪರರಾದ ಸಂಪಾದಕರ ವಿಚಾರ ಮತ್ತು ಅಭಿಪ್ರಾಯಗಳು ಈ ಬಗ್ಗೆ ಅಧಿಕೃತವಾಗಿದ್ದು ಸರ್ವ ಮಾನ್ಯವಾಗಿವೆ. ಶಾಸ್ತ್ರೀಯ ಅಧ್ಯಯನದ ದೃಷ್ಟಿಯಿಂದ ಈ ಗ್ರಂಥ ಸ್ವಾಗತಾರ್ಹವೆಂಬುದರಲ್ಲಿ ಸಂಶಯವಿಲ್ಲ.

ಪ್ರಬೋಧಕರವಾದ ಭೂಮಿಕೆಯಲ್ಲಿ ಸಂಪಾದಕರು ಅಧ್ಯಾತ್ಮಶಾಸ್ತ್ರದ ಅಧ್ಯಯನಕ್ಕೆ ಸಂಬಂಧಿಸಿದಂತಹ ಬಹು ಮುಖ್ಯ ಅಂಶವೊಂದನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಅದು ವಿಚಾರಣೀಯ. ಅಧ್ಯಾತ್ಮ ಲಾಭದ ಬಗ್ಗೆ ಪ್ರತಿಯೊಬ್ಬನಿಗೂ ಆಕಾಂಕ್ಷೆ ಇರುವುದು ಸಹಜ. ಈ ದೃಷ್ಟಿಯಿಂದ ವೀರಶೈವ ದರ್ಶನದ ನಿಲುವೇನು ? ಈ ಆಕಾಂಕ್ಷೆಯನ್ನು ಪೂರ್ಣಗೊಳಿಸುವಲ್ಲಿ ವೀರಶೈವ ಸಿದ್ಧಾಂತ ಹಾಕಿ ಕೊಟ್ಟಿರುವ ಸಾಧನೋಪಾಯಗಳೇನು ? ಅಧ್ಯಾತ್ಮ ಸಾಧನೆಯ ಪರಾಕಾಷ್ಠೆಯಾದ 'ಮೋಕ್ಷ' ಎಲ್ಲರಿಗೂ ಹೇಗೆ ಲಭ್ಯ ? ಈ ಪ್ರಶ್ನೆಗಳು ವಿಚಾರ ಮತ್ತು ಸಾಧನೆಯ ದೃಷ್ಟಿಗಳಿಂದ ಮಹತ್ವವಾದವು. ಜಾತಿ ಭೇದಗಳೆನ್ನದೆ, ಲಿಂಗ ಭೇದಗಳೆನ್ನದೆ ಮಾನವ ಸಾಮಾನ್ಯನಿಗೂ ಯಾವ ಬಗೆಯ ನಿರೋಧ ಪ್ರತಿಶೇಧಗಳೂ ಇಲ್ಲದೆ ಪರಮತತ್ತ್ವದ ದರ್ಶನ, ಅನುಗ್ರಹ ಸಿಗುವಂತಾಗಲೆಂದೇ ವೀರಶೈವ ಸಂಪ್ರದಾಯ ಮೊದಲಿನಿಂದಲೂ ಸಾರು

ತ್ತಿದೆ ಎಂದು ಶ್ರೀ ನಂಜುಂಡಾರಾಧ್ಯರು ವೇದ, ಆಗಮ, ಪುರಾಣ, ಇತಿಹಾಸಗಳ ಬೆಳಕಿನಲ್ಲಿ ಪ್ರತಿಪಾದಿಸಿದ್ದಾರೆ. ಅಧ್ಯಾತ್ಮದ ದೃಷ್ಟಿಯಿಂದ ಸಿದ್ಧಾಂತದ ಈ ನಿಲುವು ಉದಾತ್ತ ಹಾಗೂ ಉದಾರ. ಅರ್ಥಿಯ, ಸಾಧಕನ ದೃಷ್ಟಿಯಿಂದ ಆಶಾಪ್ರದ.

ಭಾರತೀಯ ತಾತ್ತ್ವಿಕ ಸಂಪ್ರದಾಯದಲ್ಲಿ ಸತ್ಯದ ತಿರುಳನ್ನು ವ್ಯವಹಾರ ಜೀವನದಲ್ಲಿ ಅನ್ವಯಗೊಳಿಸುವಾಗ ಹಲವು ಸಲ ಮಾರ್ಮಿಕವಾಗಿ ಸಾಧನ ಸ್ವಾತಂತ್ರ್ಯ ಎಲ್ಲರಿಗೂ ಇಲ್ಲವೆಂದಾಗಿರುವುದು ಕಂಡು ಬರುತ್ತದೆ. ಉದಾಹರಣೆಗೆ ಸಂಪಾದಕರು ಪ್ರಸ್ತಾಪಿಸಿರುವ ಬ್ರಹ್ಮ ಸೂತ್ರಗಳಲ್ಲಿ ಬರುವ ಅಪಶೂದ್ರಾಧಿಕರಣ. ವೇದಾಧಿಕಾರ ಶೂದ್ರರಿಗೆ ಇಲ್ಲವೆನ್ನುವ ಮಾತು. ಈ ನಿಷೇಧವನ್ನು ಯಾವ ರೀತಿಯಲ್ಲಿ ಮಾಡಲಾಗಿದೆ ಎನ್ನುವ ವಿಚಾರವಲ್ಲಿ ಅಭಿಪ್ರಾಯ ಭೇದವಿರುವುದು ಸಹಜ. ಒಂದು ಅರ್ಥದಲ್ಲಿ ವಿಧಿಸಿದ ನಿಷೇಧ ಮತ್ತೊಂದು ರೀತಿಯಲ್ಲಿ ಅಲ್ಲಗಳೆದಿರುವುದು ಪ್ರಾಚೀನ ಆಚಾರ್ಯರ ಭಾಷ್ಯಗಳಲ್ಲಿ ಕಂಡು ಬರುತ್ತದೆ. ವೇದ ಪೂರ್ವಕವಾದ ಕರ್ಮಾನುಷ್ಠಾನ ಯಜ್ಞ ಯಾಗಾದಿ ಉಪಾಸನಾ ಕ್ರಮಗಳು ಬ್ರಹ್ಮ ವಿದ್ಯೆಗೆ ಒಬ್ಬನಿಗೆ ಅಧಿಕಾರ ನೀಡುವುದಿಲ್ಲವೆಂದರೂ ಸಂಸ್ಕಾರ ಮತ್ತು ಜ್ಞಾನ ಪೂರ್ವಕವಾಗಿ ಬೇರೆ ಮಾರ್ಗಗಳಿದ್ದು ವೇದೋಪದಿಷ್ಟವಾದ ಜ್ಞಾನ, ಮುಕ್ತಿ, ಆತ್ಮ ಸಾಕ್ಷಾತ್ಕಾರ ಅಥವಾ ಬ್ರಹ್ಮ ಸಾಕ್ಷಾತ್ಕಾರಗಳಿಗೆ ಎಲ್ಲರಿಗೂ ಅಧಿಕಾರವುಂಟೆಂದು ಹೇಳುವ ಅಭಿಪ್ರಾಯ ಸಾಧನ ಮಾರ್ಗದಲ್ಲಿ ಒಂದು ಪಾರಿಭಾಷಿಕ ವ್ಯತ್ಯಾಸವನ್ನು ಸೂಚಿಸುವುದೇ ಹೊರತು ಮತ್ತೇನಲ್ಲ ಎಂದರೆ ತಪ್ಪಾಗಲಾರದು. ಏಕೆಂದರೆ ವೇದಾಧಿಕಾರ-ಒಂದು ನಿಯಮಿತ ರೀತಿಯಲ್ಲಿ-ಪಡೆಯುವುದು ಮುಖ್ಯವಲ್ಲ,ಅವರ ಗುರಿಯನ್ನು ಸಾಧಿಸುವುದು ಮುಖ್ಯ. ವೇದಾಧಿಕಾರಿಗೆ ಎಟುಕದ ಮುಕ್ತಿ ಅನಧಿಕಾರಿಗೆ ಲಭಿಸಬಹುದು. ಆದ್ದರಿಂದ 'ಅಧಿಕಾರ'ತ್ವ ಕೇವಲ ಪಾರಿಭಾಷಿಕವಲ್ಲದೆ ಮತ್ತೇನಲ್ಲ ಎಂದೆನಿಸುತ್ತದೆ. ಈ ಸಂದರ್ಭದಲ್ಲಿ ಶ್ರೀ ಶಂಕರಾಚಾರ್ಯರು ಬೃಹದಾರಣ್ಯಕ ಭಾಷ್ಯದಲ್ಲಿ ಹೇಳಿರುವ "ಜ್ಞಾಪಕಂ ಹಿ ಶಾಸ್ತ್ರಂ ನ ಕಾರಕಮಿತಿ ಸ್ಥಿತಿಃ" ಎನ್ನುವ ಮಾತನ್ನು ಗಮನಿಸಬೇಕು. ಎಂತಹ ಪಾರಿಭಾಷಿಕ ವ್ಯತ್ಯಾಸವನ್ನೂ ಮಾಡದೆ ನೇರವಾಗಿ ಸರ್ವರಿಗೂ-ಮಾನವ ಮಾತ್ರನಾದ ಪ್ರತಿ ಜೀವಿಗೂ-ಈ ಜ್ಞಾನದ, ಅನುಭವದ ಲಾಭ ಆಗಬೇಕು, ಅದಕ್ಕೆ ಅವನಿಗೆ ಅಧಿಕಾರವಿದೆ ಎಂದು ಹೇಳುವ ವೀರಶೈವ ಸಿದ್ಧಾಂತದ ದೃಷ್ಟಿ, ಆಶ್ವಾಸನೆ ವೇದಾಂತದ ಪರಮ ನೀತಿಯನ್ನು ಎತ್ತಿ ಹಿಡಿಯುತ್ತದೆ ಎಂದರೆ ತಪ್ಪಾಗಲಾರದು. ವೀರಶೈವ ದರ್ಶನ ಹೇಳುವಂತೆ 'ಶಿವದೀಕ್ಷೆ' ಎಂಬ ಸಂಸ್ಕಾರ ಎಲ್ಲರಿಗೂ ಶಿವಾನುಗ್ರಹವನ್ನು ಪಡೆಯಲು ಅಧಿಕಾರ ನೀಡುತ್ತದೆ ಎನ್ನುವ ನಿಲುವು ಅಧ್ಯಾತ್ಮ ಸಾಧನೆಯ ದೃಷ್ಟಿಯಿಂದ ಅತಿ ಸಾಧು ಮತ್ತು ಸಾಂತ್ವನ ನೀಡುವಂತಹುದು.

ಸಂಪಾದಕ ಶ್ರೀ ನಂಜುಂಡಾರಾಧ್ಯರ ವಿಷಯ ಸಂಗ್ರಹ, ವಿಚಾರ ಪ್ರತಿಪಾದನೆ ಸ್ತುತ್ಯವಾಗಿದೆ. ಇದರಿಂದ ಸಂಪಾದಿತವಾದ ಶ್ರೀಕರಭಾಷ್ಯ ವಿದ್ವತ್ಪ್ರೇಮಿಗಳಿಂದ ತತ್ತ್ವಾಕಾಂಕ್ಷಿಗಳಿಂದ ಸ್ವಾಗತಿಸಲ್ಪಡುವುದೆಂಬುದರಲ್ಲಿ ಸಂದೇಹವಿಲ್ಲ.

ಮೈಸೂರು.
1-11-1977. ಕೆ. ಬಿ. ರಾಮಕೃಷ್ಣರಾವ್.

## OPINIONS

DR. D. JAVEREGOWDA.
Former Vice Chancellor of Mysore University.

Shri M. G. Nanjundaradhya is known to me very intimately since about three decades. He is a great Sanskrit scholar and an enthuasiastic Sanskrit teacher who has spent the major part of his life for the elucidation and interpretation of some singularly singnificant Vedic and Agama texts specially from the point of view of Shakti Vishishtadvaita. He has recently edited Srikara Bhashya at the invitation of the University of Mysore and prefixed to it a scholarly and critical introduction which is an indication of his genius, sound scholarship, mature understanding and his mastery over the Sanskrit text.

His scholarship in Kannda language and Literature is equally great. Here again, he has translated some of the famous classical works in Sanskrit into Kannada very ably. They are undoubtedly valuable contributions to Kannada Language and Literature.

His commentaries whether in Sanskrit or Kannada are lucid, full of new ideas and logical. He is a prolific writer who has won the admiration and respect of many a scholar in this part of the country. In appreciation of his literary talents, extra-ordinary scholarship and his devotion to the cause of Sanskrit Education the royal and the religious courts besides many recognised institutions have conferred on him a number of titles which any worthy scholar could be proud of.

April, 12-1976. D. JAVAREGOWDA.

ಆ

DR. G. MARULASIDDIAH, M. A. Ph. D.
Professor & Head of the Department of
P. G. Studies and Research in Sanskrit
University of Mysore.

Asthan Vidwan Sri. M. G. Nanjundaradhya is known to me for over 25 years in the field of teaching and Research. All along he has maintained good records and he has published over 74 books, out of which 22 are in Sanskrit including many Upanishad Bhashyas. Many of them are published by the University of Mysore. All over Karnataka he has established his reputation and many prizes are awarded to him. To this Oriental Research Institute, he has edited 'SRIKARA BHASYA' of Sripathi Pandita of 11th Century A. D., an authoritative commentary in Sanskrit.

Both as a Professor in Shakti-vishishtadavaita Siddanta at the Maharaja's Sanskrit College, Mysore and as a merited author in public Sri M. G. Nanjundaradhya has established his own covetable place by dint of merit. With a good knowledge of all the Sastras in Sanskrit he is a distinguished scholar.

9-4-1976. G. MARULASIDDIAH.

S. S. RAGHAVACHAR
Fomer Professor of philosophy
University of Mysore.

I am glad to be recording my appreciation of the work of Prof. M. G Nanjundaradhya, in exposition of the literature, History and tenets of Saivism in general and Virasaivism in particular. His work on Bhoja's Tattwaprakasika contains a very informative account of Saivisam as a whole and a lucid Kannada translation of the great influential original Now he has brought out what may be called a definitve edition of Srikarabhashya on the Brahma sutras by Sripathi Panditaradhya. He has enhanced the value of the publication by a long and learned intraduction which covers the entire range of Saivisam and brings out the spirit and doctrine of Virasaivism in a systematic manner. He has cleared up two historical points convincingly. He shows that the author of the Bhashya was unaware of the philosophy of Madhva, as he nowhere quotes from him. He may have preceded Madhva or he may have not encountered in full the philosophy of the latter. Both are plausible suppositions. The second point concerns "Apa sudradhi karana" in the Brahma Sutra. All the other commentators opine that according to the author of the sutras, the srudras are not entitled to Brahmavidya. As Virasaivism strongly repudiates the conventional caste-system, one would expect that the Virasaiva commentator would not endorse this interpretation. surprisingly enough, Sripathi Panditaradhya fallows the other commentators in this Adhikarana. This naturally raises the question of the commentator's sectarean identity. The learned professor marshells enormous material from Virasaiva scriptures and from the same author also and counters this attitude to the Sudras. This is a welcome amendment to the Bhashya Such amendments could be constructed in all school of the Bhakti movement. The professor's scholarship has served him well in the context. The introduction is a distinct and valuable contribution to our understanding of Virasaivism in fine Sanskrit and accomplishes its purpose magnificently. It is to be welcomed wholeheartedly as it places Virasaivism on the map of Vedanta in a significant way.

16-10-1977 S. S. RAGHAVACHAR.

DR. K. KRISHNAMOORTHY
Prof. & Head of the Dept. of Sanskrit
Karanataka University Dharwar

The composition of a Bhasya on the Brahmasutras become such a prestigeous issue in Vedantic circles, that we find different new Bhasyakaras, representing the theistic school of Vaisnavism, Saivism etc. , arising along side of Sankara's famour Bhasya in the history of Vedantic thought. The present Bhasya is climed by a school of Virasaivas as their classic of philosophy and religion.

Though it has been printed earlier by editors like Hayavadana Rao who mention the exitstence of palm-leaf originals since no new plam-leaf manuscript-archetype has not yet been traceable, scholars, have sometimes questioned the genuineness of Srikara Bhasya of Sripati Pandita.

The present Devanagari edition (Vol. I upto II.1)is easily the best of the lot as it gives corrected readings and is provided with useful indices.

The learned editor has written a long introduction of 230 pages, which is at once an informative and illuminating dissertation in itself. It includes a survey of the whole field of Saiva-agama thought (in Sanskrst) in general and of Virasaivism in particular, embodying the results of a century of historical and philosophical scholarship. It provides evidences on the personality and date of Sripati and estimates his contribution of Saktivisistadvaita to Vedanta. Sri. Nanjundaradhya is to be congratulated on his brilliant dissertation.

When compared with other Bhasyas, the reader is struck by the novel attitude evidence throughout in the Srikarabhasya which has preference for theolgical material enshrined in Saiva-agamas and puranas and not limiting itself to pure philosophy, keeping in mind a religious aspirant.

26-12-1977 K. KRISHNAMOORTHY

Darsanarathna.
Prof. K. T. PANDURANGI.
Head of the Department of Post Graduate Studies &
Research in Sanskrit, Bangalore University.

I had the pleasure of going through the edition of Srikara Bhashya edited by Pandit M. G Nanjundaradhya, former Prof. of Sakti Visistadvaita at Maharaja's Sanskrit College, Mysore. This is published in the Mysore Oriental Research Institute series (No. 123) which is known for the publication of very valuable Sanskrit works. Srikara Bhashya was first edited by late Sri C. Hayavadana Rao in 1935. It was once again printed in Kannada script in 1962 by Dr. Siddapparadhya. Portions of this Bhashya were also published in Telugu scripts. However Pandit Nanjunda radhya has utilised four more manuscripts and all earlier printed editions, and has given a more authenticate text and many more useful readings. This has enhanced the value of this edition.

In his learned introduction, Pandit Nanjundaradhya has traced the history of Shaivism in India. It is interesting to note that Dvaita, Advaita, Visistadvaita, Dvaitaadvaita sub divisions have developed within Shaivism. The salient features of these are discussed in the introduction. The points of similarity between Visistadavaita of Sri. Ramanuja and Sakti-Visistadavaita propund ed by Sripati Pandita are pointed out. The intriguing questions of the identity of Sripati Pandita and his date are fully discussed

A full account of Virashaiva Philosophy and religion is given. Six useful appendices giving the sutras, source passages quoted from Veda, Upanishads, Smriti, Itihasa, Purana etc., the authors and works mentioned, and the inscription connected with Sripati Pandita are given. Pandit Nanjundaradhya has utilised all critical material available for this edition and given a scholarly exposition of diffierent aspects of Shaivism in his introduction. This volume is a useful edition to the literature of Brahma sutras and the exposition of the same according to Shakti-Visistadvaita school of philosophy.

20-2-1968.

K. T. PANDURANGI.

Dr. K. B. RAMAKRISHNA RAO
Professor & Head of the Department of
Philosophy, Mysore University

SRIKARABHASYA of Sripati Panditacharya is known well as one of the classical commentaries on the Vedanta Sutras of Badarayana. It expounds the Virasaiva siddhanta and has a great place in the tradition of Saiva philosophy of India. Though the text has been Published earlier with introductions and notes, the present one edited by Asthana Vidwan Sri Nanjundaradhya deserves to be noted. It is being published in two volumes by the Oriental Research Institute of the Mysore University.

The present publication is unique, for it brings uptodate the textual study and critical material on SRIKARABHASHYA, and presents the point of view of the learned Editor in introducing the text. The elaborate Introdution takes us through the philosophical history and development of Indian thought from the Vedas and the Upanishads, and scanning the entire relevant material of the Vedic, Agmic and Puranic thinking adjudges and places the position of SRIKARABHASYA and its philosophy in the spiritual and religious history of India. Further, by disentangling the various shades of Saiva thought it self, the Editor has bronght out the unique feature of Sripati's philosophy as propounding sakti-viseshadvaita. Besides, he has discussed the historical aspects of the commentator's place and time. The textual variants, and as many as six appendices, have great utility from the point of view of a research scholar. The learned Intorduction it self could be a handbook on Virasaivism delineating all its aspects, as would interest a student and an aspirant.

Incidentally, it may be mentioned, the Editor in his Introduction refers to a significant problem from a spiritual point of view. It is the natural concern of all to seek ultimate spiritual realisation. What stand is taken by Virasaivism in this regard, what means and methods are suggested by it, and whether the

ultimate realisation i.e. 'moksha' or 'god-realisation' could be made avilable to all-these questions are legitimate and demand our attention. Viewing them from the tradition of Virasaiva faith and philosophy, and one on the evidence of the Agamic and purana texts, it has been shown how Virasaivism has always been proclaiming the possibility of the highest spiritual realisation by any one with no restrictions of caste creed or sex, and that the spiritual path has been so liberal and open to all. The point of view is certainly attractive and deserves all commendation.

It is true that in the religious or spiritual tradition of India this freedom and eligibility have sometimes been veiled and blurred by prohibitions and injuctions. The Editor pertinently reminds us of '**apasudradhikarna**' of Vedanta Sutras, which refers to the topic of restrictions for a 'Sudra' to have recourse to Vedic studies and consquent realisation of the Highest through Vedic ritual. How the restrictions have been meant has been a matter of controversy, and differences of opinion on the problem are natural. A restriction that is laid in one way, might be lifted in another way. This is evident in the commentaries of the Acharyas. While the vedic prescriptions about the ritualistic methods to be adopted for obtaining 'brahman-knowledge' may bar some, the end or the iedal itself is not made impossible for one adopting other meditative and intuitive methods. And so, the restrictions are only of **technical** nature, and are inconsequential from the Highest point. To obtain a right to a means is not all, what is important is the realisation of the Highest, which could happen at the instance of a Guru or by the fructification of samskara. What may be unavailable to one holding a Vedic certificate, may easily be obtainable by one Vedically unqualified. The technicality of the restriction becomes evident from what Sri Sankaracharya has said: '**jnapakam hi shastram na karakam iti sthith**', which implies that the sastra (meaning the Veda) only reminds of the Goal, but does not create it for us. Its causal efficacy is limited to arousing an intuitive apprehension, which may be had by other means as well. The earnestness of the Editor is seen in demonstrating the distinction of Virashaiva Siddhanta

in not bringing any technical hindrance for obtaining the Grace of the Lord for highest realisation. It is highly welcome that Virashaivism should say that even a common man is eligible for the highest experience by a '**shiva-dihksha**' This is the highest assurance of a spiritual ethic for an aspirant, who is striving.

The religious fervour with which Sri Nanjundaradhya has udertaken to edit the work of the Acharya deserves our warm appreciation, and elaborate and erudite workmanship that has been put in, it is hoped, would be received well both by the scholar and the aspirant.

5-12-1977. K. B. RAMAKRISHNA RAO.

Dr A. N. NARASIMHAIAH
1090, Chamaraja Agrahara,
Mysore-4.

It seems the most scholarly introduction in Sanskrit to the Srikara Bhashya, edited by Pandit Nanjundaradhya and the opinions of eminent Sanskrit scholars and professors are not printed in the volume concerned.

The edition of this Srikara Bhashya brought out by Sri Hayavadana Rao and the recent Kannada version of this by Dr. Siddapparadhya are no where when compared with this critical edition of Pandit Nanjundaradhya.

The opinions of such eminent scholars and professors like Prof. S S Raghavachar and Prof. K. B. RamakrishnaRao, bring out very clearly the hard work put forth by this editor-collection, collation, comparison, etc., of materials from the different editions of this work published so far and from the unpublished manuscripts of this Bhasya in various Mutts and Libraries.

I have gone through the text, critical introduction, and the appendices of this Bhashya very very carefully and have discussed every detail from all points of view.

The opinions of such eminent scholars, liké panditraja Sri V. S. Ramachandra Sastri, Principal of the Sanskrit college of the Banaras Sanskrit University, Prof. Chandrashekhara Swamy and Prof. Dwivedi of the Sampurnananda Sanskrita Viswavidyalaya (Benaras Samskrita University) speak volumes in favour of this critical edition.

I have come to the definite conclusion the opinions of these scholars are based on hard facts. This work is a distinct contribution to the advancement of learning in this field.

The University will be honouring itself if this Bhashya is published with the critical introduction and the opinions of all these scholars.

2-11-1978. A. N. NARASIMHIAH.

# विद्वदभिप्रायाः

महामहोपाध्याय,

**पण्डितराज बि. एस्. रामचन्द्रशास्त्री**

**अस्थान विद्वान् शृङ्गेरीमठः, निवृत्ताध्यक्षः संस्कृतमहाविद्यालयः,**

**वराणसी हिन्दूविश्वविद्यालयः**

'तत्त्वज्ञानान्निःश्रेयसाधिगम' इति सर्वतन्त्रसिद्धान्तः। ऋग्वेदाद्यात्मक-शास्त्रैक-समधिगम्यं तत्त्वमिति वेद-प्रामाण्याभ्युपगन्तॄणां विनिश्चयः। वेदान्तास्तत्त्वनिर्णये प्रधानानि। परतन्त्रप्रज्ञानां वेदान्तार्थनिर्णायकन्यायप्रदर्शनार्थानि बादरायणीयानि ब्रह्मसूत्राणि। तद्विवरण-रूपाः वृत्तयः प्राणायिपतोपवर्षप्रभृतिभिराचार्यैः शङ्करभगवत्पाद प्रभृतिभिराचार्यैरनितरसाधारण-प्रतिभाप्रकर्षशालिभिर्भाष्याणि जग्रन्थिरे। साम्प्रतमुपलभ्यमानेषु भाष्येषु शाङ्करं भाष्यं प्राचीनतममित्यत्र न केऽपि विप्रतिपद्यन्ते।

भाष्यकृतः केऽपि स्वोक्त एवार्थस्सूत्राणाञ्चान्य इति हठात्कारं न कुर्वन्ति। न्यायानां प्राबल्यदौर्बल्य प्रदर्शनपूर्वकं वेदान्तार्थनिर्णये न्यायसञ्चारक्रमं निरूप्य कञ्चिदर्थं वेदान्ततात्पर्य-विषयत्वेन निष्कृषन्ति। भाष्यस्य साम्प्रदायिकेनाध्ययनेन न्यायसञ्चारक्रमे सम्यगवते तत्त्वमधिजिगांसुः स्वयं वेदान्तेषु स्वानुभवोपपत्तिभिः साधकबाधकन्यायान् सञ्चार्य तत्त्वं स्वानुभव गोचरीकृत्य कृतार्थो भवतु इत्येव भाष्यप्रणेतॄणामाशयः।

शाङ्करभाष्यानन्तरं लक्ष्मणदेशिकेन्द्राणामानन्दतीर्थयतीन्द्राणां, श्रीकण्ठयोगि प्रभृतीनां भाष्याणि प्रादुरासन्। पूर्वभाष्यकृद्भिः कृते बादरायणीय सूत्रार्थनिर्णये अपरितृप्यद्भिः कैस्त ञ्चिरसरीयैका-दशशतकोत्तरभागस्थितैः श्रीश्रीपतिपण्डिताराध्यैरन्यथैव ब्रह्मसूत्राणि व्याचक्रिरे।

**अगस्त्यमुनिचन्द्रेण कृतां वैयासिकीं शुभाम्।**
**सूत्रवृत्तिं समालोक्य कृतं भाष्यं शिवङ्करम्।**

इति भाष्यादौ लिखन्तः स्वकृतस्य ब्रह्मसूत्रविवरणस्यागस्त्यकृतवृत्त्यनुसारितां स्वसिद्धान्तस्य परम-माहेश्वरागस्त्यादिमहर्षिसम्प्रदाय प्राप्ततां चाचक्षाणाः स्वकृतस्य सूत्रार्थनिर्णयस्य स्वोपज्ञतां पर्यहार्षुः। भाष्यमिदमितरभाष्यापेक्षया विस्तृतं सम्भावितसर्वाक्षेपनिराकरणपूर्वकं सूत्रार्थं निर्णयत् विशेषाद्वैत-सिद्धान्तं स्थापयति। इदं भाष्यपरिशीलिनां वक्तव्यमिदम्। विशेषाद्वैतमेव शक्तिविशिष्टाद्वैत-मिति, शिवाद्वैतमिति विशिष्टाद्वैतमिति च व्यपदिश्यते।

भाष्यमिदं पूर्वं मुद्रितमपि सम्प्रत्यनुपलभ्यमानं विभिन्नप्रान्तीय मुद्रितामुद्रित नैकमातृका-कोशसाह्येन पुनर्मुद्राप्य प्रकटयितुमारब्धं मैसूरु विश्वविद्यानिलयाश्रित प्राच्यविद्यासंशोधन संस्थयेति महतः प्रमोदस्यास्पदम्।

भाष्यस्यास्य परिष्करणे मैसूरु महाराज संस्कृतमहापाठशाला प्रधानाध्यापकपदवीतो निवृत्ताः महाराजास्थानविद्वांसः श्रीनञ्जुडाराध्यमहोदयाः नियुक्ताः। इमे हि विशेषाद्वैत, सिद्धान्तस्याधीतिबोधाचरण प्रचारणैरविचिकित्सनिर्णयशालिनः गैर्वाणीकर्णाटिकी भाषासु नैकग्रन्थ-प्रणेतारः सुपरिचिता वीरशैवमतानुयायिनामन्येषाञ्च। परिष्करणेऽस्मिन् श्रीनञ्जुण्डाराध्य-महोदयस्य विस्तृतप्रबन्धायमाणा भूमिका प्राक्तनभाष्येभ्यो वैलक्षण्यं विषयवैशिष्ट्यञ्च प्रमाणोदाहरण पुरस्सरं विवृणोति। अष्टावरण, पञ्चाचार, षट्स्थलप्रभृति-वीरशैवसिद्धान्तानां दर्पणप्रायेऽयं भूमिका। इयं न केवलं वीरशैवमतमधिजिगांसूनामुपकरोति किन्त्वन्येषामपि तत्त्वविवेचकानां शैवमतावगमे सहायः– भूमिकेयं परिष्करणस्यास्य भूषणायते। प्रशंसनीयः श्री. एम्. जि. नञ्जुण्डाराध्यानां प्रयत्न इत्यभिप्रैमि।

प्राच्यविद्यासंशोधनालय निर्देशकानां विद्वान् डा॥ जि॥ मरुलसिद्धय्य महोपदयानां परिष्कृतप्राचीनग्रन्थमुद्रण प्रयत्नः फलेग्रहिर्भूयात् इत्याशासे॥

बेङ्गलूरु            विदुषां विधेयः

१-१२-१९७७            के॥ सु॥ रामचन्द्रशास्त्री

2

## सम्पूर्णानन्द संस्कृत विश्वविद्यालय, वाराणसी

सावहितमवलोकितमस्माभिः मैसूरु-विश्वविद्यानिलयीय-प्राच्यविद्यासंशोधनालयतः प्रकाशितस्य श्रीमता पण्डितप्रवरेण एम्. जी. नञ्जुण्डाराध्यमहोदयेन सम्पादितस्य श्रीकर-भाष्यस्य प्रथमसम्पुटम्। को नाम न जानीते श्रीकरभाष्यस्य महत्त्वम्। सम्पादनेनानेन तस्य महत्त्वं शतगुणं ख्यापितं। सम्पादकमहोदयेन विस्तृतां प्रसन्नगम्भीरपदां सर्वानागमिकदार्शनिक-विषयानात्मसात्कुर्वतीं द्विशताधिकपृष्ठपरिमितां भूमिकां ग्रन्थादौ संग्रथ्नता, अनुबन्धांश्च कांश्चत् ग्रन्थान्ते संयोजयता। श्रीकरभाष्यं हि किल वीरशैवसम्प्रदायस्य जीवातुभूतम्। वेदादि-शास्त्रपरम्परया कथं खलु विकासं लेभे तावदयं सम्प्रदाय इति सुपरिश्रम्य विवृतं विदुषा सम्पादकेन। अपशूद्राधिकरणस्यागमसंमतं व्याख्यानामुररीकृत्य विविधानां शैवागमशखानां तद्ग्रन्थानां सिद्धान्तानां च तुलनात्मकया पद्धत्या परिचयं प्रदाय तद्वैशिष्ट्यं च ख्यापितमत्र। सम्पादकमहोदया ग्रन्थस्यास्य महाराज-संस्कृत-महापाठशाला मैसूरु-स्थितायाः शक्ति-विशिष्टाद्वैतसिद्धान्तप्रधानाध्यापकचरा इति तैः स्वार्जितज्ञानस्य प्रतिभायाश्च चूडान्त उत्कर्षोऽत्र प्रदर्शित इति सन्ति ते धन्यवादार्हाः समेषामेव भारतीयदर्शनरुचीनां पाठकानामित्युक्त्वा विरम्यते–

दिनांक :

१६–१२–७७

व्रजवल्लभद्विवेदेन

योगतन्त्रविभागप्राध्यापकेन।

३

## सम्पूर्णानन्द संस्कृत विश्वविद्यालय, वाराणसी

शक्तिविशिष्टाद्वैतसिद्धान्तं तावत् वेदागमसम्मतमति प्राचीनञ्च। ब्रह्मसूत्राणामुपरि शक्ति विशिष्टाद्वैतसिद्धान्तमाश्रित्य रेणुकभगवत्पाद-नीलकण्ठप्रभृतयो भाष्याणि विरचयामासुः। तत्र विशेषाद्वैतापरपर्यायस्य शक्तिविशिष्टाद्वैतप्रतिपादितस्य श्रीकरभाष्यस्य कर्तारः श्रीपति-पंडिताराध्य भगवत्पादा' श्रीकरभाष्यमितः पूर्वं सि. हयवदनराव् महोदयेन देवनागरी-लिप्यां मुद्रितमासीत्। किन्तु तस्मिन् संस्करणे बहुप्रकाराः दोषाः आसन्। अत एव

ग्रन्थस्यास्य परिमार्जनं संशोधनञ्चापेक्षितमासीत् । एतच्च कार्यं प्राप्तं शिवानुग्रहेण विद्वद्वरैः पं. एम्. जी. नञ्जुण्डाराध्यैः विद्वत्तापूर्णयाऽनुसन्धानात्मिकया भूमिकया सह संशोधनं संस्करणं सज्जीकृत्य सम्यगनुष्ठितम् ।

प्राच्य संशोधनसंस्थाया मुद्रितोऽयं ग्रन्थः भूमिकया सह सम्यगवलोकितो मया । पण्डितप्रवरैः प्राच्य-पौरस्त्य-पद्धत्या आगमिकान् सिद्धान्तान् सम्यगालोच्य वीरशैवसिद्धान्तस्य वेदागमसम्मतत्वं च प्रकटितम् । कापालिक कालामुखादिमतमपि सम्यगत्र प्रतिपादितम् । सहैव दक्षिणदेशीयस्वतन्त्र शिवाद्वैत दर्शनस्य गुरुपरम्परापि सूचिता । सिद्धान्तस्यास्य पठन-पाठनबलाद् दीर्घकालमेतैः तलस्पर्शित्वप्रतिभा सम्यगर्जितेति । तद्बलेन रहस्यमपि सिध्धान्त-स्यास्योद्धारितं तत्र तत्र। अपि च कर्णाटकभाषा प्रतिपादितवचन शास्त्रस्यापि साहाय्य गृहीत्वा अत्रत्य सिद्धान्तः स्फुटीकृतः । वीरशैवसिद्धान्त प्रक्रियापि च सङ्ग्रहेणोट्टङ्किता । वीरशैव-दर्शनस्य दर्शनान्तरेभ्यो वैशिष्ट्यमत्र तुलनात्मकपद्धत्या प्रतिपादितम् । मन्ये ग्रन्थोऽयं सर्वेषां पण्डितानामनुसन्धानकर्तॄणां तत्त्वबुभुत्सूनां च महदुपकारी भविष्यतीति शम् ॥

डॉ॥ एन्. चन्द्रशेखरस्वामी
योगतन्त्रविभागः

दिनांक :
१३-१२-७७

४

## शिवाद्वैतसिद्धान्तरत्न, शिवतत्त्वरत्नाकर, शिवसिद्धान्त शिरोमणि, शरणधर्मभास्कर,

### दर्शन विशारद पं॥ श्री नागभूषणशास्त्री, धारवाड

विदितमेवेदमत्रभवतां विपश्चितां यदस्माकं भारते पुण्यतमे श्रीशङ्कराचार्य प्रभृतिभि-र्ब्रह्मसूत्रोपरि विरचितानि भाष्याणि अद्वैतादिपराणि विश्रुतानीति । तेषु शक्तिविशिष्टाद्वैतपरं भाष्यमेकं सर्वात्मना स्वकीयं वैशिष्ट्यं सम्पाद्य वर्तते; इति केषाचिद्दार्शनिकानामेषाविज्ञातम् । केन हेतुनेति न जानीमः ।

एतद्दर्शनं पुरा जगद्गुरुरेणुकाचार्यैरेव प्रतिष्ठापितमिति किंवदन्ती वर्तते । किन्तु तत्प्रतिष्ठापितशक्तिविशिष्टाद्वैतपरं भाष्यमद्यापि केनापि नोपलब्धम् ।

नीलकण्ठशिवाचार्यैरपि ब्रह्मसूत्रोपरि विलिखितं शक्तिविशिष्टाद्वैतपरं भाष्यमपि नोपलभ्यते । किन्तु तद्भाष्यमधिकृत्यैव विरचितः क्रियासाराभिधेयग्रन्थस्तूपलभ्यत एव । तस्मिन् शक्तिविशिष्टाद्वैतस्य व्युत्पत्तिरपि सम्यग्योनिर्दिष्टानुसारेण प्रतिपादिता दृश्यते ;

शक्तिश्च शक्तिश्च शक्ती । ताभ्यां विशिष्टौ जीवेशौ । तयोरद्वैतं शक्तिविशिष्टाद्वैतमिति ॥

एतद्दर्शनवैशिष्ट्यं सर्वश्रुतिसमन्वयरवमेव । कुशलमतिभिरिदं सम्यक् ज्ञातुं शक्यम् ।

श्रीपतिपण्डितैः ब्रह्मसूत्रोपरि विरचितं शक्तिविशिष्टाद्वैतपरं भाष्यं शङ्कराचार्यसम्मताद्वैतात् भिन्नमेवेत्यत्र नास्ति शङ्कालवोऽपि । तथापि कैश्चिदुभयोरेकत्वं प्रतिपाद्यते तत्कारणं न जानीमः । ब्रह्माद्वैते जगन्मिथ्यात्वं ब्रह्मणो निर्विशेषत्वं ज्ञानादेव कैवल्यं चेति प्रसिद्धमेव शङ्कराद्वैतम् । शक्तिविशिष्टाद्वैतं तु तद्विरुद्धमेव प्रतिपाद्यते ।

आचार्यश्रीपतिपण्डित श्रीकरभाष्ये सम्यक् प्रतिपादितमिदम्—

द्वैताद्वैतमते शुद्धे विशेषाद्वैतसंज्ञके ।
वीरशैवैकसिद्धान्ते सर्वश्रुतिसमन्वयः ॥

सर्वश्रुति समन्वयात्मकमिदं भाष्यं तत्त्वान्वेषिणां मुमुक्षूणामत्यन्तमोदावहमेवेति परिज्ञायते ।

एतादृशभाष्यग्रन्थस्य सम्पादनमहाकार्ये कृतपरिश्रमाः पण्डितप्रवरा नञ्जुण्डाराध्यमहोदयाः तत्त्वबुभुत्सुपण्डितानामभिनन्दनार्हाः । तथैव महिसूरविश्वविद्यालयाधिकारिणोपि इति शम् ॥

विद्वद्विधेयः
नागभूषणशास्त्री
सावधानसंपादकः

धारवाड

२१-१२-१९७८

KALAPRAPURNA
Nidadavolu Venkata Rao, M. A.
(Retired Head of the Department of Telugu,
Madras University)
Fellow A. P. Sahitya Akademi.

Lakshmikantanilayam
2-2-1137/5
New Nallakunta
HYDERABAD-44.

## అభిప్రాయము

సవైదికమగు ఆరాధ్య శైవసంప్రదాయమునకు పరమ ప్రామాణికమైన గ్రంథములలో శ్రీపతి పండిత విరచితమైన శ్రీకర భాష్యము ప్రధానమైనది. ఈ గ్రంథమింతకు ముందు సి. హయవదనరావుగారిచే ముద్రితమై బృహదాంగ్ల పీఠికతో వెలువడినది. కాని ఆ గ్రంథమూలమున శ్రీపతి పండితుడు ప్రతిపాదించిన శివాద్వైత సిద్ధాంతమునకే భంగము కలిగినది. అందీ గ్రంథము మధ్వాచార్య ద్వైత సంప్రదాయమునకు తరువాత రచింపబడినదని నిరూపింప బడినది. శ్రీపతి పండితుని కాలము గూర్చి క్రీ. శ. 1400 ప్రాంతమని కూడ నిర్ణయము చేయబడినది. ఇందువలన శైవ మత సాహిత్య ప్రపంచము శ్రీకర భాష్యమును గూర్చి తత్కర్తయగు శ్రీపతి పండితుని గూర్చి అజ్ఞానాంధకారమున మునిగినది.

ఇట్టి పరిస్థితిలో శ్రీకర భాష్యము నావరించిన తిమిరమును నామూలాగ్రముగ భేదించి ఆ భాష్యమునకు సహస్రముఖ సూర్యోదయము ప్రసాదించి వెలుగ జేసినవారు శివ శ్రీ నంజుండారాధ్యులవారు. వారీ గ్రంథమును సాంగముగ, సర్వతోముఖముగ, సంశోధన మొనర్చి అందు ప్రథమ సంపుటము నేడు వెల్లడించినారు. ఈ గ్రంథమునకు 210 పుటలలో నొక భూమిక గలదు. ఇందు వేద, వేదాంతాగమోప నిషద్దర్శనముల మూలమున రామానుజ మధ్వాచార్య సంప్రదాయములు పరామృష్టములై వీరశైవ విశేష సంప్రదాయితమగు శక్తి విశిష్టాద్వైతమే ప్రాచీన మని సోప పత్తికముగా నిర్ణయింప బడినది. వీరశైవ మత సిద్ధాంతము లన్నియు వివరింపబడినవి-శ్రీపతి పండితుని కాలము క్రీ. శ. 1100 పుకు ముందని స్పష్టీకరింప బడినది. నూతన విషయము లెన్నో బహిర్గత మొనరింపబడినవి. ఈ భూమిక రచించుటకు శ్రీ నంజుండారాధ్యులవారు సంస్కృత కన్నడాంధ్రాంగ్ల భాషలయందలి వీర శైవమత సంబంధములైన గ్రంథములను నూటయెనిమిదింటిని సంప్రతించినారు. ఇతః పూర్వ మీగ్రంథముపై గల వ్యాఖ్యానములు, విమర్శలు మొదలగు వానినన్నింటిని కూలంకషముగా నవలోడించినారు.

ఈ భూమిక వీరశైవ భాష్య సర్వస్వము

ఈ భూమికా రచనమున గ్రంథ సంపాదకత్వమున శ్రీ నంజుండారాధ్యులవారు ప్రదర్శించిన వైదుష్యము అప్రతిమానము; అమేయము ఈ కాలమున నిట్టి మహోద్గ్రంథము నకు సంపాదకత్వము వహించుటకు శక్తి విశిష్టాద్వైత సంప్రదాయ పారావార పారీణులు, శైవాగమ విశారదులు. వైదిక వీరశైవ దర్శనాచార్యులునగు శ్రీ నంజుండారాధ్యులవారి కన్న అధికారము గలవారు వేరెవ్వరు లేరని విన్నవించుచున్నాను.

వారు త్వరలోనే నీమహాగ్రంథ ద్వితీయాది సంపుటములను వెలయ జేయుదురుగాక.

ఇతి శివమ్

(i) ಮೊದಲ ಆಕ್ಷೇಪ ಸಮೀಕ್ಷೆ :

ಶಿವಸುತರು ವೀರಶೈವ ಧರ್ಮಗ್ರಂಥಗಳನ್ನು ಆಳವಾಗಿ ಅಭ್ಯಸಿಸಿದ್ದರೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯ ವಿರಲಾರದು. ಇವರು ೧೯೨೨ರಲ್ಲಿ ಇಂಗ್ಲೀಷಿನಲ್ಲಿ ಬರೆದಿದ್ದ ಕೆಲವು ಲೇಖನಗಳು ಅಪ್ರಕಟಿತವಾಗಿದ್ದವು. ಈಚೆಗೆ ಚಿತ್ರದುರ್ಗದ ಅಡ್ವೊಕೇಟರಾದ ಶ್ರೀ ಎಚ್. ಎಂ. ತಿಪ್ಪೇಸ್ವಾಮಿಯವರ ಸಂಪಾದಕತ್ವ ದಲ್ಲಿ ಮುಂಬಯಿ ಭಾರತೀಯ ವಿದ್ಯಾಭವನದಿಂದ ಒಂದು ಗ್ರಂಥವು (೧೯೭೬) ಪ್ರಕಾಶಿತವಾಗಿದೆ. ಇದಕ್ಕೆ ಉಪರಾಷ್ಟ್ರಪತಿ ಸನ್ಮಾನ್ಯ ಶ್ರೀ ಬಿ. ಡಿ. ಜತ್ತಿ ಅವರು ಮುನ್ನುಡಿ ಬರೆದಿದ್ದಾರೆ. ಈ ಗ್ರಂಥದಲ್ಲಿ ಈ ಧರ್ಮದ ಬಗೆಗೆ ಶ್ರೀಯುತರ ಅಭಿಪ್ರಾಯಗಳು ಸ್ಪಷ್ಟವಾಗಿ ನಿರೂಪಿತವಾಗಿವೆ. A DISCOURSE ON VEERASAIVISM. (An unwritten chapter in the religious history of India)—By T. H. M. Sadasivayya. ಎಂಬ ಗ್ರಂಥದಿಂದ ಒಂದೆರಡು ವಾಕ್ಯಗಳನ್ನು ಇಲ್ಲಿ ಉದ್ಧರಿಸಲಾಗಿದೆ.*

"Its philosophy has for its basis the Upanishads which comprise the 'JnanaKanda' of the Vedas and which have placed India on the summit of spiritual glory. As will be shown later, of all the known schools of Indian philosophy, Veerasaivism is the most conforming to the principles of the Upanishads. In his introduction t, "Sreekara Bhashya" Sreepati : one of the five celebrated commentators on the Brahma Sutras, claimed for this religion the Upanishads as the chief basis. "Viseshadwaita Philosophy", he says "is the very essence of all the Upanishads". He further says that the philosphy of the Veerasaivas is in strict conformity with all the Vedas. Besides this Sreekara Siva Charya a very great teacher of this religion appealed to the Vedas for his doctrines and looked on them with a feeling of deep veneration" (pp-8-9.)

"ಭಾರತೀಯ ಅಧ್ಯಾತ್ಮ ವೈಭವವನ್ನು ಅತ್ಯುನ್ನತಕ್ಕೆ ಒಯ್ದುವುಗಳು ವೇದಗಳ ಜ್ಞಾನ ಕಾಂಡ ವೆನಿಸಿದ ಉಪನಿಷತ್ತುಗಳು, ಅವೇ ವೀರಶೈವ ಸಿದ್ಧಾಂತಕ್ಕೆ ಆಧಾರಭೂತವಾದವುಗಳು. ಭಾರತೀಯ ತತ್ತ್ವಶಾಸ್ತ್ರದ ಇತರ ಪಂಥಗಳ ಮಧ್ಯದಲ್ಲಿ ವೀರಶೈವವು ಉಪನಿಷತ್ ತತ್ವಗಳಿಂದ ಕೂಡಿದೆ. ಸುಪ್ರಸಿದ್ಧರಾದ ಐವರು ಬ್ರಹ್ಮಸೂತ್ರಭಾಷ್ಯಕಾರರಾದ ಆಚಾರ್ಯಪುಂಗವರಲ್ಲಿ ಶ್ರೀಪತಿಪಂಡಿತಾರಾಧ್ಯರೂ ಒಬ್ಬರು. ಇವರು ತಮ್ಮ ಭಾಷ್ಯಪೀಠಿಕೆಯಲ್ಲಿ ಈ ಧರ್ಮಕ್ಕೆ ಉಪನಿಷತ್ತುಗಳೇ ಮುಖ್ಯ ಆಧಾರವೆಂದು ಘೋಷಿಸಿದ್ದಾರೆ. ಅವರು

"ಅಶೇಷೋಪನಿಷತ್ಸಾರೇ ವಿಶೇಷಾದ್ವೈತ ಮಂಡನಮ್"

"ವೀರಶೈವೈಕ ಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ"

ಎಂದಿದ್ದಾರೆ. ಎರಡನೆಯದಾಗಿ ಈ ಧರ್ಮದ ಮಹಾನ್ ಗುರುಪದವಿಯಲ್ಲಿ ಪ್ರತಿಷ್ಠಿತರಾದ ಶ್ರೀಕರ (ಶ್ರೀಪತಿ) ಶಿವಾಚಾರ್ಯರು ಈ ಸಿದ್ಧಾಂತವನ್ನು ಸ್ಥಾಪಿಸಲು ವೇದಗಳನ್ನು ಆಶ್ರಯಿಸುತ್ತಾರೆ. ಮತ್ತು ಅವುಗಳನ್ನು ಗೌರವವಾಗಿ ಉದಾಹರಿಸುತ್ತಾರೆ."

---

* First lecture was published in first universal Religious conference held at Madras in 1922.

ಮುಂದುವರೆದು "ವೀರಶೈವವು ವಿಕಾಸಗೊಂಡ ವೈದಿಕಶೈವದ ಒಂದು ಹಂತ" (Veera saivism a phase in the evolution of the vedic saivism) ಎಂಬ ಅಧ್ಯಾಯದಲ್ಲಿ (ಪು ೧೪) ವೀರಶೈವವು ದ್ವೈತಾದ್ವೈತವನ್ನು ಅಂಗೀಕರಿಸಿರುವುದನ್ನು ಸಮರ್ಥಿಸುತ್ತಿದ್ದಾರೆ.

" Veerasaivism is called Vaidik Tantrik. From what has been discussed about it is clear that there is absolutely no difference between the Vedas and the Agamas (except that the latter discards karma kanda). Veerasaivas themselves do not make any such distinction. Nilakanta Sivacharya, the earliest and the first known commentator of the Brahma Sutras, declares "we make no difference between the Veda and the Sivagama, Even the Vedas may properly be called Sivagama, Siva being author there of".

The way in which the Vedas have been spoken of by the Veerasaiva devotees has misled some of the writers to assume that Lingayets deny the authority of the vedas. Such writers ignore the fact that it is the " Karmabhaga " of the Vedas that is decried. Besides a devotee, highly intoxicated with love, ecstasy and devotion to his lord talks naturally in derision of all vain learning". (pp. 16-17.)

"ವೀರಶೈವಧರ್ಮವು ವೈದಿಕ ತಾಂತ್ರಿಕ. ವೇದ ಮತ್ತು ಆಗಮಗಳ ನಡುವೆ ಯಾವ ವ್ಯತ್ಯಾಸವೂ ಇಲ್ಲ ಎಂಬುದನ್ನು ಸವಿಸ್ತಾರವಾಗಿ ವಿವರಿಸಲಾಗಿದೆ. (ಆಗಮಗಳು ವೇದದ ಕರ್ಮಕಾಂಡವನ್ನು ಮಾತ್ರ ನಿರಾಕರಿಸುತ್ತವೆ) ಆ ಕಾರಣದಿಂದ ವೀರಶೈವರು ಈ ಎರಡೂ ಗ್ರಂಥಗಳ ನಡುವೆ ಯಾವ ಭೇದವನ್ನೂ ಎಣಿಸುವುದಿಲ್ಲ. ಬ್ರಹ್ಮಸೂತ್ರಗಳಿಗೆ ಮೊಟ್ಟಮೊದಲಿನ ಭಾಷ್ಯಕಾರರಾದ ಶ್ರೀ ನೀಲಕಂಠಶಿವಾಚಾರ್ಯರು ಹೇಳಿರುವಂತೆ ವೇದ ಮತ್ತು ಶಿವಾಗಮಗಳ ಮಧ್ಯೆ ಯಾವ ಭಿನ್ನತೆಯನ್ನೂ ಎಣಿಸುವುದಿಲ್ಲ ವೇದಗಳನ್ನು ಸಹ ಶಿವಾಗಮಗಳೆಂದೇ ಕರೆಯಬಹುದು. ಏಕೆಂದರೆ ಶಿವನೇ ಈ ಎರಡಕ್ಕೂ ಕರ್ತೃ."

"ವೀರಶೈವ ಅನುಯಾಯಿಗಳು ವೇದಗಳನ್ನು ಕುರಿತು ಹೇಳಿರುವ ಕೆಲವು ಮಾತುಗಳಿಂದಾಗಿ ಲಿಂಗಾಯತ ಧರ್ಮವು ವೇದ ಪ್ರಮಾಣವನ್ನು ನಿರಾಕರಿಸುತ್ತದೆ" ಎಂಬ ತಪ್ಪು ನಿರ್ಣಯಕ್ಕೆ ಕೆಲವರು ಬರಹಗಾರರು ಬಂದಂತಿದೆ. ಕೇವಲ ಕರ್ಮಕಾಂಡವನ್ನು ಮಾತ್ರ ನಿರಾಕರಿಸಿದೆ ಎಂಬುದನ್ನು ಅನೇಕರು ಮರೆತಂತಿದೆ. ಭಗವಂತನಲ್ಲಿ ಪ್ರೇಮ ಮತ್ತು ಭಕ್ತಿಯಿಂದ ಉನ್ಮಾದಗೊಂಡ ಭಕ್ತನು ಅರ್ಥವಿಲ್ಲದ ಪಾಂಡಿತ್ಯದ ವಿಚಾರವಲ್ಲಿ ನಿಷೇಧಾತ್ಮಕವಾಗಿ ಮಾತನಾಡುವುದು ಸಹಜ."

ಮೇಲಿನ ಎರಡು ಉಲ್ಲೇಖಗಳಿಂದ ವೀರಶೈವವುವೇದಾಗಮೋಪನಿಷತ್ತುಗಳನ್ನು ಪ್ರಮಾಣಿಸುವುದೆಂದೂ, ಸುಪ್ರಸಿದ್ಧ ಬ್ರಹ್ಮಸೂತ್ರಭಾಷ್ಯಕಾರರು ಐವರಲ್ಲಿ ಒಬ್ಬರೆಂದು ಪರಿಗಣಿಸಲ್ಪಟ್ಟಿರುವ ಶ್ರೀಪತಿಪಂಡಿತಾರಾಧ್ಯರು ವೇದಾಗಮಗಳ ಆಧಾರದ ಮೇಲೆ ವೀರಶೈವ ಸಿದ್ಧಾಂತದ ಪರವಾಗಿ ಶ್ರೀಕರಭಾಷ್ಯವನ್ನು ರಚಿಸಿರುತ್ತಾರೆ ಎಂಬುದನ್ನು ಶ್ರೀಸದಾಶಿವಯ್ಯನವರು ಘಂಟಾಘೋಷವಾಗಿ ಸಾರಿದ್ದಾರೆ. ಮುಂದುವರೆದ ಅವರ ಲೇಖನದಲ್ಲಿ ವೀರಶೈವಧರ್ಮವು ಬಸವಾದಿಗಳಿಗಿಂತ ಹಿಂದೆಯೇ ಸ್ಥಾಪಿತವಾಗಿದ್ದಿತೆಂಬುದನ್ನು ಕಾಣಬಹುದು.

(ii) ಎರಡನೆಯ ಆಕ್ಷೇಪ ಸಮೀಕ್ಷೆ :—

"Thus it is proved beyond dispute that Veerasaivism which, by its sudden and starting uprise in the 12th century led historians to attribute its orgin to the great revolution at Kalyan, was but a distinct phase in the evolution of the Vedic Hinduism. The History of Hinduism itself, is one of incessan struggles t between conservation and ritualism on the one hand and liberalism and spiritualism on the other, each school having its rise and fall at one time or the other." (p. 17)

" ಹೀಗೆ ೧೨ ನೆಯ ಶತಮಾನದಲ್ಲಿ ಉದ್ದೀಪ್ತವಾಗಿ ಪ್ರಕಾಶಗೊಂಡ ವೀರಶೈವ ಧರ್ಮವನ್ನು ಅನೇಕ ಇತಿಹಾಸಕಾರರು ಅಂದಿನಿಂದಲೇ ಮೊದಲಾಯಿತೆಂಬ ನಿರ್ಣಯಕ್ಕೆ ಬಂದರು. ಆದರೆ ಕಲ್ಯಾಣದಲ್ಲಿ ನಡೆದ ಈ ಕ್ರಾಂತಿ ವೈದಿಕ ಹಿಂದೂ ಧರ್ಮದ ವಿಕಾಸದಲ್ಲಿ ಒಂದು ಪ್ರಮುಖವಾದ ಹಂತ ಎಂಬುದನ್ನು ಮರೆತರು. ಸನಾತನತೆ ಮತ್ತು ವಿನೂತನತೆಯ ನಡುವಿನ ನಿರಂತರ ಘರ್ಷಣೆ ಹಿಂದೂ ಧರ್ಮದ ಇತಿಹಾಸದಲ್ಲೆಲ್ಲ ಹಾಸು ಹೊಕ್ಕಾಗಿ ಬಂದಿದೆ. ಇವುಗಳಲ್ಲಿ ಒಂದೊಂದು ಕಾಲದಲ್ಲಿ ಒಂದರ ಮೇಲುಗೈಯನ್ನು ಕಾಣಬಹುದು. "

ಎಂದು ಹೇಳಿ ಈ ನಿಲುವನ್ನು ತರ್ಕಬದ್ಧವಾದ ನಿದರ್ಶನಗಳೊಂದಿಗೆ ಗ್ರಂಥಕಾರರು ಸಮರ್ಥಿಸಿದ್ದಾರೆ. ಮಾತ್ರವಲ್ಲದೆ ಬಸವ ಪೂರ್ವಯುಗದಲ್ಲಿ ಆಗಮ ಸಿದ್ಧಾಂತ ತತ್ತ್ವಗಳ ಮೇಲೆ ರೇಣುಕಾದಿ ಪಂಚಾಚಾರ್ಯರು ವೀರಶೈವ ಸಿದ್ಧಾಂತವನ್ನು ಸ್ಥಾಪಿಸಿದ್ದರೆನ್ನುವುದನ್ನು ಹೀಗೆ ನಿರೂಪಿಸಲಾಗಿದೆ.

"This neo-Vaidic religion (if I may be permitted to call so) soon spread throughout the length and breadth of India by the missionaries of the Agamanta school and was very soon appropriated by the Dravidian cult to which the Aryan fire-worship and the sacrificial rites were quite foreign. The great sage Agastya seems to have been the first aryan who bore the torch of the Agamanta philosophy.....Renukacharya was one of the five celebrated missionaries of the Agamanta philosophy who are said to have established the Virashaiva religion by arranging the Agamic doctrines as a code of systematic dogmatics. The said Acharyas are named differently in different yugas. In the present Kali yugas they are called Revanaradyha, Marularadhya, Ekoramaradhya, Panditaradhya and Viswaradhya. Their history is as much enshrouded in the mist of the unknowable past as that of Vasishta, Viswamitra and such other rishis of the Vaidic school." (pp. 18)

" ಆಗಮಾಂತ ತತ್ತ್ವ ಪ್ರಚಾರಕರೆನಿಸಿ, ಆಗಮ ಸಿದ್ಧಾಂತ ತತ್ತ್ವಗಳು ಸುವ್ಯವಸ್ಥಿತವಾಗಿ ರೂಪು ಗೊಂಡ ವೀರಶೈವ ಧರ್ಮದ ಸಂಸ್ಥಾಪಕರಾದ ಪಂಚಾಚಾರ್ಯರಲ್ಲಿ ಶ್ರೀ ರೇಣುಕಾಚಾರ್ಯರೂ ಒಬ್ಬರು. ಇವರಿಂದ ಆಗಸ್ತ್ಯರು ವೀರಶೈವ ಧರ್ಮೋಪದೇಶವನ್ನು ಪಡೆದರು. ಇಂಥ ಆಗಮಾಂತ ತತ್ತ್ವ ಜ್ಯೋತಿ ಯನ್ನು ದಕ್ಷಿಣದ ಕಡೆಗೆ ತಂದ ಮೊಟ್ಟ ಮೊದಲನೆಯ ಆರ್ಯರ್ಷಿ ಅಗಸ್ತ್ಯರು. ಈ ಆಚಾರ್ಯರನ್ನು ಬೇರೆ ಬೇರೆ ಯುಗಗಳಲ್ಲಿ ಬೇರೆ ಬೇರೆ ಹೆಸರಿನಿಂದ ಕರೆಯಲಾಗಿದೆ. ಇಂದಿನ ಕಲಿಯುಗದಲ್ಲಿ ಅವರನ್ನು ರೇವಣಾ

ರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ ಮತ್ತು ವಿಶ್ವಾರಾಧ್ಯ, ಎಂದು ಕರೆಯಲಾಗಿದೆ. "

"ಅವರ ಚರಿತ್ರೆಯು ವೈದಿಕ ಧರ್ಮದ ಋಷಿಗಳೆನಿಸಿರುವ ವಶಿಷ್ಠ,ವಿಶ್ವಾಮಿತ್ರರ ಇತಿಹಾಸದಷ್ಟೆ ಅಸ್ಪಷ್ಟವಾಗಿದೆ." ಇನ್ನು ಗ್ರಂಥಕಾರರು ವೀರಶೈವರು ಅಪ್ರಾಕೃತ ಗೋತ್ರಗಳನ್ನು ಹೊಂದಿರುವರೆಂಬುದನ್ನು ವೀರಶೈವ ಸಂಪ್ರದಾಯವನ್ನು ಆಧರಿಸಿ ವಿವರಿಸಿದ್ದಾರೆ.

Just as the Brahmins trace their original descent to one of the Vadic Rishis, the Lingayats trace theirs to these Acharyas and call themselves as belonging to the Pramata Gotras as opposed to the Rishi Gotras of the Prakrit Brahmins. Any attempt to constuct a history of these hoary personages would be futile and it suffices to say that these Acharyas are to the Virashaivas what Visvamitra, Vasista etc., are to the Brahmins. (p–19)

"ಪಾಕೃತ ಬ್ರಾಹ್ಮಣರು ತಮ್ಮ ಗೋತ್ರಗಳನ್ನು ವೈದಿಕ ಋಷಿಗಳ ಪರಂಪರೆಯಿಂದ ಸ್ಥಾಪಿಸುವಂತೆ ಲಿಂಗಾಯತರು ಅದಕ್ಕೆ ಭಿನ್ನವಾಗಿ ಪ್ರಮಥ ಗೋತ್ರದ ಈ ಪಂಚಾಚಾರ್ಯರ ಮೂಲದಿಂದ ತಮ್ಮ ಉಗಮವನ್ನು ಹೇಳುತ್ತಾರೆ. ಈ ಪಂಚಾಚಾರ್ಯರ ಇತಿಹಾಸವನ್ನು ನಿರ್ದಿಷ್ಟಗೊಳಿಸುವ ಪ್ರಯತ್ನ ಕೇವಲ ವ್ಯರ್ಥ. ಏಕೆಂದರೆ ಬ್ರಾಹ್ಮಣರಿಗೆ ವಸಿಷ್ಠ, ವಿಶ್ವಾಮಿತ್ರ ಋಷಿಗಳು ಹೇಗೆಯೋ ವೀರಶೈವರಿಗೆ ಪಂಚಾಚಾರ್ಯರು ಹಾಗೆ. "

ಕಡೆಯದಾಗಿ ಶ್ರೀ ಸದಾಶಿವಯ್ಯ (ಶಿವಸುತ)ನವರು ತಮ್ಮ ಗ್ರಂಥನಲ್ಲಿ

"But the Lingayets rely upon the first known commentary bySree Neelakanta Sivacharya, who according to many scholars preceded Sree Sankaracharya. According to Mr. Nallaswami Pillai, "Sree Nilakanta's Bhashyam on the Brahma Sutras is the earliest commentry now extant and as such it is entitled to the great weight and will be found to be the most accurate and reliable interpreter of the Vedanta Sutras and SreeNilakanta is the accepted authority by the Southern Saiva school". It is now proved by Dr. Thibaut and Prof. Maxmuller that the interpretation of Sree Sankaracharya is not correct. The Lingayets recognise the other great Saivaite Commentator Sreekanata. Dating back to 11th century there is"Sreekara Bhashyam" of Sreepati Pandita expounding Veerasaiva philosophy as Viseshadwaitam." [p. 20]

"ನಲ್ಲಸ್ವಾಮಿ ಪಿಳ್ಳೆಯವರ* ಅಭಿಪ್ರಾಯದಲ್ಲಿ ಬ್ರಹ್ಮಸೂತ್ರಗಳ ಮೇಲೆ ಬರೆದಿರುವ ನೀಲಕಂಠಭಾಷ್ಯವು ಈಗ ದೊರೆತಿರುವ ಎಲ್ಲ ಭಾಷ್ಯಗಳಿಗಿಂತಲೂ ಮೊದಲನೆಯದಾಗಿದ್ದು, ವೇದಾಂತ ಸೂತ್ರಗಳಿಗೆ ಅತ್ಯಂತ

*Vide Mr. Nallaswamy pillai's "Studies in Saiva Siddanta.

ನಿರ್ದಿಷ್ಟವೂ ಪ್ರಮಾಣಬದ್ಧವೂ ಆದ ಭಾಷ್ಯವಾಗಿದೆ. ಮತ್ತು ಈ ನೀಲಕಂಠರು ದಾಕ್ಷಿಣಾತ್ಯ ಶೈವಸಿದ್ಧಾಂತಕ್ಕೆ ಪ್ರಮಾಣಪುರುಷರು." ಶಂಕರಾಚಾರ್ಯರ ಭಾಷ್ಯವು ಅಷ್ಟು ಪ್ರಮಾಣಬದ್ಧವಲ್ಲವೆಂಬುದನ್ನು ಡಾ|| ತಿಬಟ್ ಮತ್ತು ಮ್ಯಾಕ್ಸ್‌ಮುಲ್ಲರರು ಸ್ಥಾಪಿಸಿದ್ದಾರೆ.

"ಲಿಂಗಾಯತರು ಶೈವಸಂಪ್ರದಾಯದ ಮತ್ತೊಬ್ಬ ಭಾಷ್ಯಕಾರನಾದ ಶ್ರೀಕಂಠನನ್ನು ಪ್ರಮಾಣವಾಗಿ ಉದಾಹರಿಸುತ್ತಾರೆ. ೧೧ನೆಯ ಶತಮಾನಕ್ಕೆ ಸೇರಿದ ಶ್ರೀಪತಿ ಪಂಡಿತನು ತನ್ನ ಶ್ರೀಕರ ಭಾಷ್ಯದಲ್ಲಿ ವೀರಶೈವ ದರ್ಶನವನ್ನು "ವಿಶೇಷಾದ್ವೈತ" ಎಂದು ನಿರೂಪಿಸಿದ್ದಾನೆ."

ಮೇಲೆ ಕಂಡ ತಮ್ಮ ಗ್ರಂಥದ ಈ ಉಲ್ಲೇಖಗಳಿಂದ ಶ್ರೀಸದಾಶಿವಯ್ಯನವರು ಶ್ರೀಪತಿಯನ್ನು ಶ್ರೀಕರ ಭಾಷ್ಯ ಕರ್ತೃವೆಂದು ಹೇಳಿರುವುದಲ್ಲದೆ, ಈ ಧರ್ಮದ ಪ್ರತಿಷ್ಠಾಪಕರು ಬಸವಪೂರ್ವಯುಗಕ್ಕೆ ಸೇರಿದ ರೇಣುಕಾದಿ ಪಂಚಾಚಾರ್ಯರೆಂದೂ, ಅವರು ನಂದ್ಯಾದಿ ಪ್ರಮಥಗೋತ್ರ ಪ್ರವರ್ತಕರೆಂದೂ ಒಪ್ಪಿರುವುದಲ್ಲವೆ ಈ ಭಾಷ್ಯಕ್ಕೂ ಮೊದಲಿನದಾದ ನೀಲಕಂಠ ಭಾಷ್ಯದಿಂದ ಶ್ರೀಪತಿಯು ಪ್ರಭಾವಿತನಾಗಿರುವನೆಂಬುದನ್ನು ಪರ್ಯಾಯವಾಗಿ ಅಂಗೀಕರಿಸಿ ಈ ಭಾಷ್ಯವು ವೀರಶೈವಧರ್ಮದ ಪ್ರಮಾಣಗ್ರಂಥವೆಂಬುದನ್ನು ನಿಸ್ಸಂಶಯವಾಗಿ ಒಪ್ಪಿದ್ದಾರೆ. ಇದರಿಂದ ಇವರು ಶ್ರೀರಂಭಾಪುರಿಯ ಪೀಠದ ಪಟ್ಟಾಧಿಕಾರದ ತರುವಾಯ (೧೯೩೩) ಪೂರ್ವಗ್ರಹ ಪೀಡಿತರಾಗಿ ಬರೆದ ಲೇಖನಗಳಲ್ಲಿ ಉದ್ಧರಿಸಿದ ಮೊದಲ ಎರಡು ಆಕ್ಷೇಪಗಳು ಇದರಿಂದ ನಿರಾಕೃತವಾಗಿವೆ.

(ii) ಮುದ್ರಿತವಾಗಿರುವ ಹಯವದನರಾಯರ ಶ್ರೀಕರಭಾಷ್ಯದಲ್ಲಿ ಸಮಾವೇಶವಾಗಿರುವ "ಮಧ್ವ" ಪದವನ್ನು ಕುರಿತ ಸಮೀಕ್ಷೆ

ಶ್ರೀಕರ ಭಾಷ್ಯದ ಪ್ರಥಮ ಸಂಪುಟ ಭೂಮಿಕೆಯಲ್ಲಿ ಮಧ್ವಪದ ಪ್ರಯೋಗದ ಔಚಿತ್ಯವನ್ನು ಕುರಿತು ವಿದ್ವಾಂಸರು ಮಾಡಿರುವ ಸಮೀಕ್ಷೆಯನ್ನು ಕೊಡಲಾಗಿದೆ. ಅದು ಹೀಗಿದೆ,

"ಶ್ರೀಕರಭಾಷ್ಯದಲ್ಲಿ ಶ್ರೀ ಶಂಕರ-ರಾಮಾನುಜರ ಭಾಷ್ಯ ವಾಕ್ಯಗಳು ಯಥಾ ಮೂಲವಾಗಿ ಉದ್ಧೃತವಾಗಿರುವಂತೆ ಮಧ್ವ ಭಾಷ್ಯದ ಒಂದು ವಾಕ್ಯವೂ ಉದ್ಧೃತವಾಗಿಲ್ಲ. ಭಾಷ್ಯದಲ್ಲಿ ದ್ವೈತನಿರಾಕರಣವಿದೆ. ಆದರೆ ಅದು ಮಧ್ವಾಚಾರ್ಯೋಪಜ್ಞವಾದ ದ್ವೈತವಲ್ಲ ; ಬದಲಾಗಿ ಅದು ಪ್ರಾಚೀನ ದ್ವೈತ" ಇತ್ಯಾದಿ

ಈ ದಿಸೆಯಲ್ಲಿ ಕೊಂಚ ವಿಚಾರ ಮಾಡಬೇಕಾಗಿದೆ—ಶಿವಸುತರು ತಮ್ಮ ಲೇಖನಗಳಲ್ಲಿ 'ದೇವಿಡಿ ಜಮೀನ್‌ದಾರ್ ಬಾಲಸೂರ್ಯ ಪ್ರಸಾದರಾವ್ ಅವರ ಶೈವಗ್ರಂಥಾಲಯದಲ್ಲಿ ಶ್ರೀಕರಭಾಷ್ಯದ ಎರಡು ತಾಲಪತ್ರ ಮಾತೃಕೆಗಳೂ ಒಂದು ಹಸ್ತಲಿಖಿತ ಮಾತೃಕೆಯೂ ಇತ್ತು ಎಂದು ಎರಡು ಕಡೆ ಉಲ್ಲೇಖಿಸಿದ್ದಾರೆ. ಆದರೆ ಅವರು ಆ ಮಾತೃಕೆಗಳನ್ನು ಕಣ್ಣಾರೆ ಕಂಡವರಲ್ಲ ಎಂದು ಅವರ ಲೇಖನದಿಂದಲೇ ಸ್ಪಷ್ಟವಾಗುತ್ತದೆ. ಬದಲಾಗಿ ಅವರು ದಿ. ಸಿ. ಹಯವದನರಾಯರ ಉಪೋದ್ಘಾತವನ್ನು ಕಂಡೇ ಹಾಗೆ ಹೇಳಿದಂತೆ ತಿಳಿದು ಬರುತ್ತದೆ. ಏಕೆಂದರೆ ಶ್ರೀಹಯವದನರಾಯರು ಸಂಪಾದಿಸಿದ ಶ್ರೀಕರಭಾಷ್ಯವು ಪ್ರಕಟವಾದುದು ೧೯೩೬ರಲ್ಲಿ ; ಅನಂತರ ಡಾ|| ಚಿಲಕೂರಿನಾರಾಯಣರಾಯರು ಸಂಪಾದಿಸಿದ 'ಮಲ್ಲಿಕಾರ್ಜುನ ಪಂಡಿತಾರಾಧ್ಯ ಚಾರಿತ್ರವು ಪ್ರಕಟವಾದುದು ೧೯೩೯ರಲ್ಲಿ, ಆ ತರುವಾಯ ಶ್ರೀ ಸದಾಶಿವಯ್ಯನವರು 'ಶಿವಸುತ'ಎಂಬ ಗುಪ್ತನಾಮದಿಂದ ಶ್ರೀಕರಭಾಷ್ಯದ ಮೇಲೆಖಂಡನಾತ್ಮಕ ಲೇಖನಗಳನ್ನು ಬರೆಯಲು ಆರಂಭಿಸಿದ್ದು ೧೯೪೩ ರಿಂದ ೪೫ರವರೆಗೆ! ಇಲ್ಲಿ ಗುಪ್ತನಾಮದಿಂದ ಬರೆದುದರ ಅಂತರ್ಯವೇನಿರಬಹುದೆಂದು ಸಹೃದಯರು ಪರ್ಯಾಲೋಚಿಸಬೇಕು !

ಈ ಮಧ್ಯೆ, ಜಮೀನ್ದಾರರು ತಮಗೆ ಆಪ್ತಮಿತ್ರರೆಂದೂ ಅವರು ೧೯೪೩ರಲ್ಲಿ ಲಿಂಗೈಕ್ಯರಾದರೆಂದೂ ಶಿವಸುತರೇ ಬರೆದಿದ್ದಾರೆ. ಆದರೆ ಇಲ್ಲಿ ಶಿವಸುತರು ಜಮೀನ್‌ದಾರರು ತೀರಿಕೊಂಡ ಮೇಲೆಯೇ ತಮ್ಮ ಖಂಡನೆ

ಯೆನ್ನು ಆರಂಭಿಸಿದ್ದುದರ ಕಾರಣವೂ ವಿಚಾರಣೀಯವೆ! ಇಷ್ಟರಲ್ಲಿ ಆಂಧ್ರಭಾಷಾಭಿಮಾನಿಗಳಾದ ಶಿವಸುತರು ತೆಲುಗಿನಲ್ಲಿ ಪ್ರಕಟವಾದ ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರೆ ಮತ್ತು ಅದರ ಪೀಠಿಕೆಯನ್ನು ಓದದೆ ಇರಲಿಲ್ಲ. ಅದರ ಸಂಪಾದಕರಾದ ಡಾ. ನಾರಾಯಣರಾಯರು, ಪಂಡಿತಾರಾಧ್ಯ ಚರಿತ್ರೆಯ ಪೀಠಿಕೆಯಲ್ಲಿ (ಪು. ೩೦, ೩೩) "ಮುದ್ರಿತ ಶ್ರೀಕರ ಭಾಷ್ಯದಲ್ಲಿ ಕಂಡ 'ಮಧ್ವ' ಪದ ಸಮಾವೇಶದ ಔಚಿತ್ಯವನ್ನು ಕುರಿತು, ಶ್ರೀಕರಭಾಷ್ಯ ಸಂಪಾದಕರಾದ ಶ್ರೀ ಹಯವದನರಾಯರಿಗೆ, ತಮ್ಮಲ್ಲಿದ್ದ ಮಾತೃಕೆಗಳನ್ನು ಕೊಟ್ಟಿದ್ದ ಜಮೀನ್‌ದಾರರಿಗೆ ಪತ್ರ ವೊಂದನ್ನು ಬರೆದು, ಶ್ರೀಕರಭಾಷ್ಯ ಮಾತೃಕೆಗಳಲ್ಲಿ ಉಕ್ತಸ್ಥಳಗಳಲ್ಲಿ ಮಧ್ವಪದವುಂಟೆ?" ಎಂದು ಕೇಳಿದ್ದಕ್ಕೆ ಜಮೀನ್‌ದಾರರು ತಮ್ಮಲ್ಲಿದ್ದ ಶ್ರೀಕರಭಾಷ್ಯ ಮಾತೃಕೆಗಳನ್ನು ಶೋಧಿಸಿ "ಉಕ್ತಸ್ಥಳಗಳಲ್ಲಿ ಎಲ್ಲಿಯೂ ಮಧ್ವಪದವಿಲ್ಲ" ಎಂದು ಪತ್ರಬರೆದದ್ದನ್ನು ಶ್ರೀ ನಾರಾಯಣರಾಯರು ತಮ್ಮ ಪೀಠಿಕೆಯಲ್ಲಿ ನಮೂದಿಸಿರುವುದನ್ನು ಶಿವಸುತರು ನೋಡದೆ ಇರಲು ಸಾಧ್ಯವಿಲ್ಲ. ಅಂದ ಮೇಲೆ ಶಿವಸುತರು ಇಂಥ ಮಹತ್ವದ ವಿಷಯವನ್ನು ಕುರಿತು ತಮ್ಮ ಆಪ್ತಮಿತ್ರರಾಗಿದ್ದ ಸದರಿ ಜಮೀನ್ದಾರರಲ್ಲಿ ಪತ್ರ ಮುಖೇನ ಪ್ರಸ್ತಾಪಿಸಿ ಸದರಿ ಭಾಷ್ಯ ಮಾತೃಕೆಗಳಲ್ಲಿ ಮಧ್ವಪದವಿರುವುದರ ನಿಜವನ್ನು ದೃಢಪಡಿಸಿಕೊಳ್ಳಬಹುದಾಗಿತ್ತು. ಹಾಗೆ ಅವರು ಪ್ರಸ್ತಾಪಿಸಿದ್ದ ಪಕ್ಷದಲ್ಲಿ ಖಂಡಿತವಾಗಿಯೂ ಅವರು ಆ ವಿಷಯವನ್ನು ತಮ್ಮ ಲೇಖನಗಳಲ್ಲಿ ಬಹಿರಂಗ ಪಡಿಸದೆ ಬಿಡುತ್ತಿರಲಿಲ್ಲ. ಅಥವಾ ಅವರು ಸ್ವಯಂ ದೇವಡಿಯವರಲ್ಲಿಗೇ ಭೇಟಿಕೊಟ್ಟು ಅವರಲ್ಲಿದ್ದ ಶ್ರೀಕರಭಾಷ್ಯಮಾತೃಕೆಗಳನ್ನು ಸಾಕ್ಷಾತ್ತಾಗಿ ಅವಲೋಕಿಸಿದ್ದ ಪಕ್ಷದಲ್ಲಿಯೂ ಅವರು ಆ ತಾಲಪತ್ರ ಮಾತೃಕೆಗಳು ಕೃತಕವೆ ? ಪ್ರಾಚೀನವೆ ? ಇತ್ಯಾದಿ ವಿವರಗಳನ್ನು ಸಚಿತ್ರ ವಾಗಿ ಅವುಗಳ ಉದ್ದ– ಅಗಲ ಮುಂತಾದವುಗಳನ್ನು ಕುರಿತು ವಿಸ್ತಾರವಾಗಿ ಬಣ್ಣಿಸದೆ ಬಿಡುತ್ತಿರಲಿಲ್ಲ. ಆದರೆ ಅವರ ಲೇಖನಗಳಲ್ಲಿ ಇದರ ಯಾವ ಸೂಚನೆಯೂ ಕಾಣುವುದಿಲ್ಲ. ಈ ದೃಷ್ಟಿಯಿಂದ ಶ್ರೀಯುತರು ತಾಲಪತ್ರ ಮಾತೃಕೆಗಳನ್ನು ಸಾಕ್ಷಾತ್ ನೋಡಿದವರಲ್ಲವೆಂಬುದು ಸುಸ್ಪಷ್ಟ !

ಹಾಗಾದರೆ ಮುದ್ರಿತ ಶ್ರೀಕರ ಭಾಷ್ಯದಲ್ಲಿ ಕಂಡು ಬರುವ 'ಮಧ್ವ' ಪದ ಸಮಾವೇಶಕ್ಕೆ ಮೂಲವು ಯಾವುದು ? ಎಂದು ಯೋಚಿಸುವುದು ಅಗತ್ಯ. ಈ ದಿಸೆಯಲ್ಲಿ ಡಾ|| ನಾರಾಯಣರಾಯರು ಹೇಳುವಂತೆ ದೇವಿಡಿಯವರಲ್ಲಿದ್ದ ಮೂರು ಮಾತೃಕೆಗಳಲ್ಲಿಯೂ ಮಧ್ವಪದವಿಲ್ಲ ವೆಂದಾಯಿತು. ಇನ್ನು ವಾರಾಣಸಿಯ ಜಂಗಮವಾಡಿ ಮಠಾಧ್ಯಕ್ಷರಾದ ಜ|| ವೀರಭದ್ರ ಶಿವಾಚಾರ್ಯರು (ಚಿದರೇಮಠದ ವೀರಭದ್ರ ಶರ್ಮ) "ತಾವು ಪರಿಶೀಲಿಸಿದ ಇತರ ಮೂರು ಶ್ರೀಕರಭಾಷ್ಯ ಮಾತೃಕೆಗಳಲ್ಲಿ ಉಕ್ತಸ್ಥಳಗಳಲ್ಲಿ ಮಧ್ವಪದವಿಲ್ಲ" ಎಂದು ತಮ್ಮ ಶ್ರೀಕರ ಭಾಷ್ಯ ಚತುಸ್ಸೂತ್ರಿಯ ಪೀಠಿಕೆಯಲ್ಲಿ ಬರೆದಿದ್ದಾರೆ. ಆದರೆ ಇಲ್ಲಿ ಶಿವಸುತರು "ಸಿಕಿಂದ್ರಾಬಾದಿನ ಪಂಡಿತ ಸ್ವಾಮಿಯಲ್ಲಿದ್ದ ತೆಲುಗು ಮುದ್ರಿತ ಪ್ರತಿ ಮತ್ತು ಅದರ ಮೂಲವಾದ ಹಸ್ತಪ್ರತಿಗಳಲ್ಲಿ ಮಧ್ವಪದವುಂಟು'' ಎನ್ನುತಾರೆ. ಅದು ನಿಜವಿರಬಹುದು, ಏಕೆಂದರೆ ಶಿವಸುತರು ಮತ್ತು ಶ್ರೀ ಹಯವದನರಾಯರು ಹೇಳುವಂತೆ ಬೆಂಗಳೂರಿನ ಶ್ರೀ ಬಸವರಾಧ್ಯರು ಸಿಕಿಂದ್ರಾಬಾದಿನ ಶ್ರೀ ಪಂಡಿತಸ್ವಾಮಿ ಎಂಬುವರಲ್ಲಿದ್ದ ಹಸ್ತಪ್ರತಿಯಿಂದ ಬೇರೆ ಪ್ರತಿಮಾಡಿಸಿ ತರಿಸಿಕೊಂಡ ಹಸ್ತಪ್ರತಿಯಲ್ಲಿ ಇಂದಿಗೂ ಉಕ್ತಸ್ಥಳಗಳಲ್ಲಿ ಮಧ್ವಪದವು ಕಂಡು ಬರುತ್ತದೆ. ಸದರಿ ಹಸ್ತಪ್ರತಿಯ ಕೆಲವು ಭಾಗಗಳು ಇಂದು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಸಂಸ್ಥೆಯ ಪುಸ್ತಕ ಭಂಡಾರದಲ್ಲಿವೆ ಕೈ. ಬಸವಾರಾಧ್ಯರ ಸಂಬಂಧಿಗಳೊಬ್ಬರಿಂದ ಅವು ಈಚೆಗೆ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಬಂದಿವೆ. ನಾನು ಅವುಗಳನ್ನು ಪರಿಶೀಲಿಸಿ, ಅವಕ್ಕೆ "ಗ A" ಎಂದು ಹೆಸರಿಸಿ ಪರಿಷ್ಕೃತ ಶ್ರೀಕರಭಾಷ್ಯದ ಅಡಿ ಟಿಪ್ಪಣಿಯಲ್ಲಿ ಉಕ್ತಸ್ಥಳಗಳಲ್ಲಿ ಅಲ್ಲಿದ್ದ ಮಧ್ವ ಪದವನ್ನು ಕೊಟ್ಟಿದ್ದೇನೆ.

ಸಿಕಿಂದ್ರಾಬಾದಿನ ಪಂಡಿತ ಸ್ವಾಮಿಯವರು ಕಳುಹಿಸಿದ್ದ ಮುದ್ರಿತ ಮತ್ತು ಹಸ್ತಪ್ರತಿಗಳನ್ನು ಆಧರಿಸಿಯೇ ಪ್ರಾಯಃ ಹಯವದನರಾಯರು ತಾವು ಸಂಪಾದಿಸಿದ ಪ್ರತಿಯಲ್ಲಿಯೂ ಅಲ್ಲಿದ್ದ ಮಧ್ವಪದವನ್ನು ಸೇರ್ಪಡೆ ಮಾಡಿರುವುದು ಸಾಧ್ಯ. ಸದರಿ ಮಧ್ವಪದವನ್ನು ಅವರು ಅಡಿಟಿಪ್ಪಣಿಯಲ್ಲಿ ಪಾಠಾಂತರವಾಗಿ ಕೊಡದೆ

ಅದನ್ನು ಮೂಲದಲ್ಲಿಯೇ ಸೇರ್ಪಡೆ ಮಾಡಿದ್ದು ಪ್ರಮಾದವಿರಬಹುದಾದರೂ ಅಷ್ಟುಮಾತ್ರಕ್ಕೆ ಅವರ ಬಗೆಗೆ 'ಮಧ್ವಮತಾನುಯಾಯಿಗಳಾದ ಅವರು ಸ್ವತಃ ಮಧ್ವಪದವನ್ನು ಭಾಷ್ಯದಲ್ಲಿ ಸೇರ್ಪಡೆಮಾಡಿದರೆಂದು ಆಪಾದಿಸುವುದು ಉಚಿತವೆನಿಸದು. ಆದರೂ ಶ್ರೀ ಹಯವದನರಾಯರ ಈ ಅಜಾಗರೂಕತೆಯೆ ಈ ಬಗೆಯ ಭಿನ್ನಾಭಿಪ್ರಾಯಗಳಿಗೆ ಕಾರಣವಾಯಿತೆಂಬುದನ್ನು ಮರೆಯುವಂತಿಲ್ಲ.

ಇನ್ನು ಶ್ರೀಕರ ಭಾಷ್ಯದ ಇತರ ಮಾತೃಕೆಗಳಲ್ಲಿ ಕಾಣದಿರುವ ಮಧ್ವಪದವು ಸಿಕಿಂದ್ರಾಬಾದಿನ ಪ್ರತಿಯಲ್ಲಿ ಮಾತ್ರ ಕಂಡಿರುವುದರಿಂದ ಅದು ಪ್ರಕ್ಷಿಪ್ತವಿರಬೇಕು. ಏಕೆಂದರೆ ಶಿವಸುತರು ಹೇಳುವಂತೆ ಪಂಡಿತ ಸ್ವಾಮಿಯವರಿಗೆ ಶ್ರೀಕರಭಾಷ್ಯವನ್ನು ಮುದ್ರಣಗೊಳಿಸುವ ಮೊದಲು ಪರಮತ ಪಂಡಿತರ ಸಹಾಯದಿಂದ ಆ ಭಾಷ್ಯವನ್ನು ಅಲ್ಲಲ್ಲಿ ಪರಿಷ್ಕರಿಸುವ ಉದ್ದೇಶವಿತ್ತು. ಏಕೆಂದರೆ ಆರಾಧ್ಯ ಸಂಪ್ರದಾಯಕ್ಕೆ ಹಿಂದಿನಿಂದಲೂ ಪ್ರಮಾಣಗ್ರಂಥಗಳೆನಿಸಿದ್ದ ನೀಲಕಂಠಭಾಷ್ಯ, ಶ್ರೀಕರಭಾಷ್ಯ ಮತ್ತು ಲಿಂಗಧಾರಣಚಂದ್ರಿಕಾಗಳಲ್ಲಿರುವ ''ವೀರಶೈವವು ಖನನ ಮತ್ತು ಆರಾಧನೆಗಳನ್ನು ಒಪ್ಪಿದೆ. ಇದು ದಕ್ಷಿಣದ ವೀರಶೈವ ಸಂಪ್ರದಾಯವಾಗಿದೆ. ಅದಕ್ಕಾಗಿ ಆ ಸ್ಥಳಗಳಲ್ಲಿ ದಹನ–ಸಾಪಿಂಡ್ಯಾದಿಗಳನ್ನು ಸೇರಿಸಿ, ಆರಾಧ್ಯ ಸಂಪ್ರದಾಯವನ್ನು ಸ್ಮಾರ್ತ ಬ್ರಾಹ್ಮಣ್ಯದ ಮಟ್ಟಕ್ಕೆ ಏರಿಸಬೇಕೆಂಬ ಹಂಬಲವಿತ್ತು. ಇದಕ್ಕಾಗಿಯೇ ಅವರು ರಾಮಗೋವಿಂದಶಾಸ್ತ್ರಿ'', ಸೀತಯ್ಯಶಾಸ್ತ್ರಿ ಮುಂತಾದವರೊಂದಿಗೆ ವೀರಶೈವ ಗ್ರಂಥ ಪರಿಷ್ಕಾರದಲ್ಲಿ ತೊಡಗಿದ್ದರು, ಈ ದಿಸೆಯಲ್ಲಿ "ಸದ್ವೈದಿಕ ವೀರಶೈವಾಚಾರ ನಿರ್ಣಯ" ಎಂಬ ಗ್ರಂಥವೂ ಹೊರಬಿದ್ದಿತ್ತು. ಈ ಬಗೆಗೆ ಅಲ್ಲಿನ ಪತ್ರಿಕೆಗಳಲ್ಲಿ ಖಂಡನ ಮಂಡನಗಳು ಏರ್ಪಟ್ಟಿದ್ದವೆಂದು ಶಿವಸುತರ ಲೇಖನಗಳಿಂದ ವೇದ್ಯವಾಗುತ್ತದೆ. ಪರಮತ ಪಂಡಿತರಿಂದ ವೀರಶೈವ ಮತಗ್ರಂಥಗಳನ್ನು ತಿದ್ದಿಸುವರೆಂಬ ಸುದ್ದಿ ಕೇಳಿದ ದೇವಿಡಿ ಜಮೀನ್ದಾರರು, ತಾವು ಶ್ರೀಕರ ಭಾಷ್ಯಪ್ರಕಟನೆಗಾಗಿ ಕೊಡಲೊಪ್ಪಿದ್ದ ಹತ್ತು ಸಾವಿರ ರೂಪಾಯಿಗಳ ವಾಗ್ದಾನವನ್ನು ಹಿಂತೆಗೆದು ಕೊಂಡರು ಎಂದೂ ಶಿವಸುತರು ಸೂಚಿಸಿದ್ದಾರೆ. ಆದ್ದರಿಂದ ಪ್ರಾಯಃ ಪಂಡಿತಸ್ವಾಮಿಯವರು ಶ್ರೀಕರಭಾಷ್ಯ ಮುದ್ರಣಕ್ಕಾಗಿ ಸಿದ್ಧಪಡಿಸುತ್ತಿದ್ದ ಹಸ್ತಪ್ರತಿ ಮತ್ತು ಅದೇ ಮೂಲವಾಗಿ ಮುದ್ರಣಗೊಂಡ ಮುದ್ರಿತ ಪ್ರತಿಗಳಲ್ಲಿ ಹೇಗೊ ಕೆಲವು ಪ್ರಕ್ಷಿಪ್ತಗಳು ಭಾಷ್ಯದಲ್ಲಿ ನುಸುಳಿರುವುದು ಸಂಭವ. ಶ್ರೀಕರಭಾಷ್ಯದ ಎಲ್ಲ ಮಾತೃಕೆಗಳೂ ನಮ್ಮೆದುರಿಗೆ ಇಲ್ಲದಿರುವುದರಿಂದ ಈ ಬಗೆಗೆ "ಇದು ಹೀಗೆಯೇ" ಎಂದು ಹೇಳಲಾಗುವುದಿಲ್ಲ. ಇವುಗಳನ್ನು ದೊರಕಿಸಿಕೊಳ್ಳುವ ದಿಸೆಯಲ್ಲಿ ನನಗೆ ಸೂಕ್ತ ಸೌಲಭ್ಯಗಳು ವಿಶ್ವವಿದ್ಯಾನಿಲಯದ ಸಂಶೋಧನ ಸಂಸ್ಥೆಯಿಂದ ಒದಗದ ಪ್ರಯುಕ್ತ ನಾನು ಯತ್ನವಿಲ್ಲದೆ ಈ ಪ್ರಯತ್ನವನ್ನು ಕೈ ಬಿಡಬೇಕಾಯಿತು.

ಇನ್ನು ದಿ || ಹಯವದನರಾಯರ ಕಾಲದಲ್ಲಿ ಪ್ರಕ್ಷಿಪ್ತವಾಗಿ ಪಾಠಾಂತರದಲ್ಲಿರಬೇಕಾಗಿದ್ದ "ಮಧ್ವ" ಪದವು ಮೂಲದಲ್ಲಿಯೇ ಸೇರ್ಪಡೆಯಾದುದರ ಪರಿಣಾಮವಾಗಿ ಚರಿತ್ರೆಯ ಮೇಲೆ ಆಗಿರುವ ಆಘಾತ ಊಹಾತೀತವಾದದ್ದು. ಏಕೆಂದರೆ ಇದು ಶ್ರೀಪತಿ ಪಂಡಿತರ ಕಾಲದ ಬಗೆಗೆ ತಪ್ಪು ಕಲ್ಪನೆಗಳುದಿಸಲು ಕಾರಣವಾಯಿತು. ಈ ಕಾರಣದಿಂದಲೇ ನ್ಯಾಯಮೂರ್ತಿ ಶ್ರೀಮಾನ್ ಟಿ. ಎನ್. ಮಲ್ಲಪ್ಪನವರಂತಹವರೂ ಕೂಡ ಶ್ರೀಪತಿಯನ್ನು ೧೬ನೆಯ ಶತಮಾನದವನೆಂದು ಊಹಿಸಿ, ಅದಕ್ಕೆ ಆಧಾರ ಹುಡುಕ ಹೋಗಿ ನಿರಾಧಾರವಾದ ಕಲ್ಪನೆಗಳಿಗೆ ತುತ್ತಾಗಿರುವುದು ಕಂಡು ಬರುತ್ತದೆ. ಶ್ರೀಯುತರು ಶ್ರೀಪತಿಯ ಗುರು ಶ್ರೀಶೈಲದ "ಜ || ಶ್ರೀವಿರೂಪಾಕ್ಷ ದೇಶಿಕೇಂದ್ರರೆಂಬುದನ್ನು ಒಪ್ಪಿಕೊಂಡು, ಅವರ ಕಾಲವನ್ನು ೧೬ನೇ ಶತಮಾನದ ಅನಂತರವಿರಬಹುದು" ಎಂದು ಊಹಿಸಿದ್ದಾರೆ. [1] ಇದಕ್ಕೆ ಕಾರಣ ಪುಲ್ಲ ಕವಿ (ಕ್ರಿ.ಶ ೧೪೦೦) ತನ್ನ "ಶ್ರೀಶೈಲ ಪಂಡಿತಾರಾಧ್ಯ ಚಾರಿತ್ರ"ದ ಪೀಠಿಕಾ ಭಾಗದಲ್ಲಿ ಪೌರಾಣಿಕವಾದ ಹಿನ್ನಲೆ ಹಾಕಿಕೊಂಡಿರುವುದು. ಅಲ್ಲಿ ಕೈಲಾಸದ ಸಭೆ; ಅಲ್ಲಿ ನಾರದನು ಶಿವನಿಗೆ "ಭೂಲೋಕದಲ್ಲಿ ಬಸವಾದಿಗಳ ತರುವಾಯ ವೀರಶೈವವು ಖಿಲವಾಗಿದೆ. ಆದಕ್ಕೆ ನಿನ್ನ ಅಂಶ ರೂಪನಾದ ಮಹಾತ್ಮನನ್ನು ಕಳುಹಿಸು" ಎಂದು ಪ್ರಾರ್ಥಿಸಿದ. ಆ ಫಲವಾಗಿ ಶ್ರೀ ವಿರೂಪಾಕ್ಷನ ಉದಯ. ಕಾಶಿಯಲ್ಲಿ ಆತನಿಂದ ಶಿವದೀಕ್ಷೆ ಪಡೆದವನು "ಶ್ರೀಪತಿ

* ಪಂಚಭಾಷ್ಯತುಲನಾತ್ಮಕ ವಿವೇಚನೋಪೇತ ಬ್ರಹ್ಮಸೂತ್ರದರ್ಶನ ಪು. ೧೦೫

ಪಂಡಿತ. ಇಲ್ಲಿ ಕೈಲಾಸದ ವಿಷಯ ಕವಿ ಕಲ್ಪನೆಯೇ ಹೊರತು ಅದಕ್ಕೆ ಚಾರಿತ್ರಿಕವಾದ ಯಾವ ಆಧಾರವೂ ಇಲ್ಲ. ಏಕೆಂದರೆ ಅಲ್ಲಿ ಹೇಳಿರುವ ಪ್ರಕಾರ ಶ್ರೀವಿರೂಪಾಕ್ಷನ ಶಿಷ್ಯರು ಶ್ರೀ ಚಂದ್ರಗುಂಡರು. ಅವರ ಶಿಷ್ಯ ದೇವರದಾಸಿಮಯ್ಯ ( ಕ್ರಿ. ಶ. ೧೦೩೩ ). ಈತ ಪೊಟ್ಟಲ ಕೆರೆಯಲ್ಲಿದ್ದ ಜಯಸಿಂಹನ ರಾಣಿ ಸುಗ್ಗಲೆಗೆ ಶಿವ ದೀಕ್ಷೆಯಿತ್ತವನು. ಇದರಿಂದ ಚಂದ್ರಗುಂಡರ ಕಾಲವನ್ನು ಕ್ರಿ. ಶ. ಸುಮಾರು ೧೦೦೦–೧೦೨೦ ಎಂದು ದಿ || ಗೋವಿಂದಪೈ ( ಪು.೧೯೭ ) ಮತ್ತು ಡಾ || ಎಸ್. ಶ್ರೀಕಂಠಶಾಸ್ತ್ರಿ ( ಪು. ೨೬೦ ) ಮುಂತಾದವರು ಊಹಿಸಿರುತ್ತಾರೆ. [1] ಆತನ ಗುರು ಶ್ರೀ ವಿರೂಪಾಕ್ಷ ದೇಶಿಕೇಂದ್ರರು ; ಅವರಿಂದ ಶಿವದೀಕ್ಷೆ ಪಡೆದವನು ಶ್ರೀಪತಿ, ಎಂದಮೇಲೆ ಶ್ರೀಪತಿಯ ಕಾಲ ಕ್ರಿ. ಶ. ಸುಮಾರು ೧೦–೧೧ನೆಯ ಶತಮಾನವೆಂಬುದು ಸಿದ್ಧವಾಗಿರುವ ವಿಷಯ. ಹೀಗಿರುವಾಗ ಅವರ ಕಾಲವನ್ನು ಪೌರಾಣಿಕ ಕವಿ ಕಲ್ಪನೆಯ ಆಧಾರದ ಮೇಲೆ ಕ್ರಿ. ಶ. ೧೪೦೦ ಎಂದು ಹೇಳುವುದು ಎಂತಹ ಚಾರಿತ್ರಿಕಾಭಾಸ!

## ೨

ಶ್ರೀಯುತರು ಆವೇಶ( ? ) ಪೂರ್ಣವಾದ ತಮ್ಮ ಬರವಣಿಗೆಯಲ್ಲಿ ಯುಕ್ತಾಯುಕ್ತತೆಗಳ ಲಯ ತಪ್ಪಿರುವುದನ್ನು ಕಾಣಬಹುದು. ಉದಾಹರಣೆಗೆ—ಸುರಿತ ವಿದ್ವಾಂಸರೂ ಲಬ್ಧ ಪ್ರತಿಷ್ಠರೂ ಆಗಿದ್ದ ದಿ || ಸಿ. ಹಯವದನರಾಯರ ಬಗೆಗೆ ಬಳಸಿರುವ ಭಾಷೆ ಇದಕ್ಕೆ ಒಂದು ನಿದರ್ಶನ. ಮೇಲಾಗಿ ರಾಯರು ಸಂಪಾದಿಸಿರುವ ಕೃತಿಯ ಬಗೆಗೆ " ಕೃತಿಚೌರ್ಯಪರ " ಎಂದು ಆಪಾದಿಸಿ, " ಆ ಭಾಷ್ಯದಲ್ಲಿ ಭಾಷ್ಯಾಂತರ ವರ್ಣಿತಗಳಾದ ವಿಷಯಗಳನ್ನು ಅನುವಾದ ರೂಪದಿಂದ ಆನುಪೂರ್ವೀ ರೂಪದಿಂದ ಸೇರಿಸಲಾಗಿದೆ " ಎಂದು ಗೇಲಿ ಮಾಡಲಾಗಿದೆ. ಆದರೆ ಇದು ಬಲ್ಲವರು ಆಡುವ ಮಾತಲ್ಲ. ಏಕೆಂದರೆ ಪ್ರಾಚೀನ ಆಚಾರ್ಯರ ಅಥವಾ ಕವಿಗಳ ಕೃತಿಗಳಲ್ಲಿ ಇತರ ಆಚಾರ್ಯರ ಇಲ್ಲವೆ ಇತರ ಕೃತಿಗಳ ಛಾಯೆ ಅಥವಾ ಅನುಸರಣವಿರುವುದು ಹೊಸದಲ್ಲ. ಇದನ್ನು " ಕೃತಿಋಣ " ವೆನ್ನಬಹುದೇ ಹೊರತು " ಕೃತಿಚೌರ್ಯ " ವೆನ್ನಲಾಗದು. " ಬಾಣೋಚ್ಛಿಷ್ಟಂ ಜಗತ್ಸರ್ವಂ " ಎಂಬ ಮಾತು ಜನಜನಿತ. ಜಗತ್ತಿನಲ್ಲಿ ಜನ್ಮಧಾರಣಮಾಡಿರುವ ಪ್ರತಿ ಮಾನವನೂ " ಋಷಿ ಋಣ " ದಿಂದ ಮುಕ್ತನಾಗಿಲ್ಲ. ಹಿಂದಿನ ಋಷಿ ಮುನಿಗಳು, ವಿಭೂತಿ ಪುರುಷರು ಹಾಗೂ ಸಾಧು ಸಂತರ ಅನುಭವೋಕ್ತಿಗಳಿಂದ ನಾವೆಲ್ಲ ಪ್ರಭಾವಿತರಾಗಿದ್ದೇವೆ. ಹಿಂದಿನ ಎಲ್ಲ ಕವಿಗಳೂ ತಮ್ಮ ಕೃತಿಗಳಲ್ಲಿ ಪ್ರಾಚೀನ ಕವಿಗಳನ್ನು ನೆನೆದಿರುವುದೇ ಇದಕ್ಕೆ ನಿದರ್ಶನ.

ಈ ದಿಸೆಯಲ್ಲಿ ದೊಡ್ಡ ವಿದ್ವಾಂಸರೂ ಸಹೃದಯರೂ ಆದ ದಿ || ಬೆಳ್ಳಾವೆ ವೆಂಕಟನಾರಣಪ್ಪನವರು ಈ ಕವಿಋಣದ ಬಗೆಗೆ ಹೇಳಿರುವ ಮಾತುಗಳು ಗಮನಾರ್ಹವಾಗಿವೆ.

" ಕವಿತೆಗೆ ಪ್ರತಿಭೆ ಬೀಜ ಭೂತವಾದದ್ದು ; ಆದರೂ ' ವ್ಯುತ್ಪತ್ತಿ ' ' ಅಭ್ಯಾಸ ' ಗಳೆಂಬ ಗೊಬ್ಬರ ಹಾಕಿ ವ್ಯವಸಾಯ ಮಾಡಿದ ನೆಲದಲ್ಲಿ ಬೀಜ ಬಿತ್ತಿದರೆ ವಿನಾ ಅದರಿಂದ ಅಷ್ಟು ಫಲ ದೊರೆಯಲಾರದು. ' ವ್ಯುತ್ಪತ್ತಿ ' ಎಂದರೆ ಲೋಕ–ಕಾವ್ಯ, ಇವುಗಳಿಂದ ಗಳಿಸಿದ ಜ್ಞಾನ. ' ಅಭ್ಯಾಸ ' ಎಂದರೆ ಸುಕವಿಗಳ ಕಟ್ಟು ಪಾಡನ್ನು ಅನುಸರಿಸಿ, ಅವಿಚ್ಛಿನ್ನವಾಗಿ ಕೆಲಸ ಮಾಡುತ್ತಿರುವುದು. ಹೀಗೆ ಮಾಡುವಲ್ಲಿ ಆದರ್ಶವಾಗಿಟ್ಟುಕೊಂಡ ಕವಿಗಳ ಭಾವಗಳೂ ಪ್ರಯೋಗಗಳೂ ಮನಸ್ಸಿನಲ್ಲಿ ಬೇರೂರಿ ಸಹಜವಾಗಿಯೇ ಹೊರ ಹೊಮ್ಮುವವು. ಈ ಕಾರಣದಿಂದಲೇ ಯಾವ ಕವಿಯಾಗಲಿ, ಇತರ ಕವಿಗಳ ಛಾಯೋಪಜೀವಿಯಾಗ

---

1 ದೇವರ ದಾಸಿಮಾರ್ಯಪ್ರಶಸ್ತಿ (ಭಾಗ–೨ ಸ್ಮಾರಕೋತ್ಸವ ಗ್ರಂಥ ಪ್ರಕಟನೆ, ಜ. ನಿಡುಮಾಮಿಡಿ ನಿವಾಸ ೧೯೫೩.)

ಬೇಕಾಗುವುದು. ಇಷ್ಟು ಮಾತ್ರಕ್ಕೇ ಕವಿಯಲ್ಲಿ ತಪ್ಪೆಣಿಸಲಾಗದು. ತೆಂಗಿನ ಮರಕ್ಕೆ ಎರೆದ ನೀರು,, ಎಳೆ ನೀರಾಗಿ ಪರಿಣಮಿಸುವಂತೆ ಇತರ ಕವಿಗಳ ಭಾವಗಳೂ ಪ್ರಯೋಗಗಳೂ ಪ್ರತಿಭಾಶಾಲಿಯಲ್ಲಿ ತಕ್ಕ ಮಾರ್ಪಾಟನ್ನು ಹೊಂದಿ ಹುಟ್ಟುವ ಕಾವ್ಯಗಳು ಉತ್ಕೃಷ್ಟವಾದವುಗಳೇ ಆಗುವುವು....ಮೊದಲಿದ್ದುದನ್ನೇ ಆಗಲಿ ಹೊಸ ಶಬ್ದಾರ್ಥಗಳಿಂದ ಹೊಸ ರೀತಿಯಲ್ಲಿ ತನ್ನ ಪ್ರತಿಭೆಯು ಸ್ಫೂರ್ತಿಸುವಂತೆ ಚಮತ್ಕಾರವಾಗಿ ವರ್ಣಿಸುವನೇ 'ಮಹಾಕವಿ' ಎನಿಸಿಕೊಳ್ಳುವನು" ಎಂಬ ಮಾತು ಅಕ್ಷರಶಃ ನಿಜ.

ಈ ದೃಷ್ಟಿಯಿಂದ ಹಿಂದಿನ ಭಾಸ, ಕಾಳಿದಾಸ, ಭಾರವಿ ಮುಂತಾದವರೆಲ್ಲರೂ ಅವರ ಹಿಂದಿನ ವ್ಯಾಸ ಮತ್ತು ವಾಲ್ಮೀಕಿ ಮುಂತಾದ ಋಷಿ ಕವಿಗಳಿಗೆ ಆಭಾರಿಗಳು, ಏಕೆಂದರೆ ಇವರು ರಾಮಾಯಣ, ಮಹಾ ಭಾರತ ಅಥವಾ ಪುರಾಣಾದಿಗಳಿಂದ ಕಥಾ ವಸ್ತುವನ್ನು ವಿಷಯಗಳನ್ನು, ಉದ್ಧರಿಸಿಕೊಂಡೇ ಕೃತಿ ರಚಿಸಿ ಮಹಾ ಕವಿಗಳೆನಿಸಿದರು. ಮಹಾಕವಿ ಕಾಳಿದಾಸನೂ ಇದಕ್ಕೆ ಅಪವಾದವಾಗಿಲ್ಲ.

ಈತ 'ಶಿವ ಪುರಾಣ' ದಲ್ಲಿ ಬರುವ 'ಗಿರಿಜಾ ವಿವಾಹ' ಪ್ರಕರಣದ ಅನೇಕ ಶ್ಲೋಕಗಳನ್ನು, ಶ್ಲೋಕ ಭಾಗಗಳನ್ನು ತನ್ನ 'ಕುಮಾರ ಸಂಭವ' ಮಹಾ ಕಾವ್ಯದಲ್ಲಿ ಸೇರ್ಪಡೆ ಮಾಡಿಕೊಂಡಿರುವುದನ್ನು ವಿದ್ವಾಂಸರು ಗುರ್ತಿಸಿದ್ದಾರೆ.[1] ಮಹಾಕವಿ ಪಂಪನು ತನ್ನ 'ಪಂಪ ಭಾರತ' ಮತ್ತು 'ಆದಿ ಪುರಾಣ' ಗಳಲ್ಲಿ ವಾಲ್ಮೀಕಿ ರಾಮಾಯಣ, ವಿಕ್ರಮೋರ್ವಶೀಯ, ಶಾಕುಂತಲ, ಕುಮಾರಸಂಭವ, ಶಿಶುಪಾಲವಧ, ಕಿರಾತಾರ್ಜುನೀಯ, ವೇಣೀಸಂಹಾರ, ಮಾಲತೀಮಾಧವ, ಮುಂತಾದ ಕಾವ್ಯಗಳ ಶ್ಲೋಕಗಳನ್ನು ಅವರ ಹೆಸರು ಹೇಳದೆಯೇ ನಿರರ್ಗಳವಾಗಿ ಕನ್ನಡಿಸಿ ಕೊಂಡಿರುವುದನ್ನು ಕಾಣಬಹುದು.[2] ಇದರಂತೆ ಮಹಾ ಕವಿ ರನ್ನ, ಪೊನ್ನ, ಹರಿಹರ, ಷಡಕ್ಷರಿವರೆಗಿನ ಇತರ ಕನ್ನಡ ಕವಿ ಕೃತಿಗಳಲ್ಲಿಯೂ ಸಾಕಷ್ಟು ಉದಾಹರಣೆ ಗಳನ್ನು ಕಾಣಬಹುದು. ಈ ದೃಷ್ಟಿಯಿಂದ 'ಕವಿಋಣ' ದಿಂದ ಯಾರೂ ಪಾರಾಗಿಲ್ಲವೆಂಬುದು ಸುಸ್ಪಷ್ಟ.

ಪ್ರಕೃತ ಕನ್ನಡ, ಸಂಸ್ಕೃತ ಕವಿಗಳ ಬಗೆಗೆ ಹೇಳಿರುವ ಮಾತು ದರ್ಶನ ಶಾಸ್ತ್ರಗಳಿಗೂ ಅನ್ವಯಿಸು ತ್ತದೆ ಎಂದು ಬೇರೆ ಹೇಳಬೇಕಾಗಿಲ್ಲ. ಈ ಬಗ್ಗೆ ನಿವೃತ್ತ ಶ್ರೇಷ್ಠ ನ್ಯಾಯಾಲಯದ ನ್ಯಾಯಮೂರ್ತಿಗಳೂ, ವೇದ ವೇದಾಂತ ವಿದ್ಯಾವಾಚಸ್ಪತಿ ಎಂದು ಹೆಸರಾಂತವರೂ ಆದ ಶ್ರೀ ಟಿ. ಎನ್. ಮಲ್ಲಪ್ಪನವರು ಹೇಳಿ ರುವ ಮಾತು ಪರಿಶೀಲನಾರ್ಹ.

"ಶಾಂಕರ ಭಾಷ್ಯವು ನಮಗೆ ದೊರೆತಿರುವ ಸೂತ್ರ ಭಾಷ್ಯಗಳಲ್ಲೆಲ್ಲ ಮೊದಲನೆಯದು. ಇತರ ಅನೇಕ ಭಾಷ್ಯಗಳು ಶಾಂಕರ ಭಾಷ್ಯವನ್ನು ಅನುಸರಿಸಿವೆ. ಭಿನ್ನಾಭಿಪ್ರಾಯಗಳಿರುವ ಶ್ರೀ ಭಾಷ್ಯದಲ್ಲಿ ಶಾಂಕರ ಭಾಷ್ಯದ ಸಿದ್ಧಾಂತವು ಪೂರ್ವ ಪಕ್ಷವಾಗಿಯೂ ಅದರ ಪೂರ್ವ ಪಕ್ಷವು ಸಿದ್ಧಾಂತವಾಗಿಯೂ ಇರುತ್ತದೆ."[3]

ಈ ಮಾತು ಶ್ರೀಕರ ಭಾಷ್ಯಕ್ಕೂ ಅನ್ವಯಿಸುತ್ತದೆ. ಶ್ರೀಕರ ಭಾಷ್ಯದಲ್ಲಿ ಅದರ ಹಿಂದಿನ ಶ್ರೀ ಶಂಕರ, ಶ್ರೀಕಂಠ ಮತ್ತು ಶ್ರೀ ಭಾಷ್ಯ ಪಂಕ್ತಿಗಳು ಅನುವಾದ ರೂಪವಾಗಿಯೂ ಅನುಪೂರ್ವೀ ರೂಪವಾಗಿಯೂ ಬಂದಿರುವ ವಿಷಯವನ್ನು ನನ್ನ ಭೂಮಿಕೆಯಲ್ಲಿಯೇ ಸೂಚಿಸಲಾಗಿದೆ. ಮೇಲಾಗಿ ಶ್ರೀಪತಿ ಪಂಡಿತರು ಇತರ ಆಚಾರ್ಯರು ಹೇಳಿರುವ ಅಭಿಪ್ರಾಯಗಳನ್ನು ಅವರವರ ಮಾತುಗಳಿಂದಲೇ ಪೂರ್ವ ಪಕ್ಷವಾಗಿಯೋ ಸಿದ್ಧಾಂತವಾಗಿಯೋ ಅನುವಾದ ಮಾಡಿ, ಅದರ ಮೇಲೆ "ಕಿಂಚ" ಎಂದು ಆರಂಭಿಸಿ ತಮ್ಮ ವಿಚಾರಗಳನ್ನು

---

[1] ಶ್ರೀ ನಾರಾಯಣಾಚಾರ್ಯ ಸಂಪಾದಿತ "ಕುಮಾರ ಸಂಭವ" ಪರಿಶಿಷ್ಟ ೧೩ನೇ ಮುದ್ರಣ. ನಿರ್ಣಯ ಸಾಗರ ಪ್ರೆಸ್ ಬೊಂಬಾಯಿ!

[2] ಪಂಪ ಭಾರತ ಉಪೋದ್ಘಾತ ಪು. xxxix–೧೯೩೧. ಕನ್ನಡ ಸಾಹಿತ್ಯ ಪರಿಷತ್ ಪ್ರಕಟನ

[3] ಪಂಚಭಾಷ್ಯತುಲನಾತ್ಮಕ ವಿವೇಚನೋಪೇತ ಬ್ರಹ್ಮಸೂತ್ರದರ್ಶನ ಪು. ೭೮

ಮಂಡಿಸಿರುತ್ತಾರೆ. ಮತ್ತೆ ಕೆಲವೆಡೆ ಇತರರ ಅಭಿಪ್ರಾಯಗಳು ತಮಗೆ ಅಭಿಮತವಾಗಿದ್ದ ಪಕ್ಷದಲ್ಲಿ ತಾವೂ ಅವನ್ನೇ ತಮ್ಮ ಸಿದ್ಧಾಂತವಾಗಿಯೂ ಮಾಡಿಕೊಂಡಿರುವುದು ಆಚಾರ್ಯರ ಪ್ರಾಮಾಣಿಕತೆಗೆ ನಿದರ್ಶನ. ಏಕೆಂದರೆ ಇತರ ಭಾಷ್ಯಕಾರರ ಅಭಿಪ್ರಾಯಗಳನ್ನೇ ಬೇರೆ ಶಬ್ದಗಳಿಂದ ನಿರೂಪಿಸುವುದಕ್ಕಿಂತ ಅದೇ ಆನುಪೂರ್ವಿಯಿಂದಲೇ ಹೇಳುವುದು ಪ್ರಶಸ್ತ. ಎರಡನೆಯದಾಗಿ ಸ್ವಸಿದ್ಧಾಂತ ಪ್ರತಿಪಾದನೆಯಲ್ಲಿ ಶ್ರೀಪತಿ ಪಂಡಿತರು ಮಾಡಿರುವ ವಿವೇಚನೆ ಅಮೋಘವಾದದ್ದು. ಉದಾಹರಣೆಗೆ–ಚತುಸ್ಸೂತ್ರೀ, ಸರ್ವತ್ರಪ್ರಸಿದ್ಧ್ಯಧಿಕರಣ, ಉತ್ಪತ್ತ್ಯಸಂಭವಾಧಿಕರಣ ಮುಂತಾದ ಕಡೆಗಳಲ್ಲಿರುವ ಅವರದೇ ಆದ ನಿಲುವು, ವಾದಸರಣಿ ಮತ್ತು ಪ್ರತಿಭೆಗಳು ಮೆಚ್ಚತಕ್ಕವು. ಅಲ್ಲಿ ಅವರು ಶ್ರೀ ಭಾಷ್ಯವನ್ನು ಖಂಡಿಸಿರುವ ಕ್ರಮವೂ ದರ್ಶನೀಯ. ಇನ್ನೂ ಕೆಲವು ಕಡೆ ಇವರು ಶ್ರೀಕಂಠರನ್ನು "ಶಿವಾಗ್ರಗಣ್ಯ, ಶಿವಾರಾಧ್ಯ" ಎಂದು ಹೊಗಳಿದ್ದರೂ ಸಹ ಅವರು ಹೇಳುವ "ವಿಶಿಷ್ಟಾದ್ವೈತ" ಎಂಬ ಪದವೇ ಅಸಂಗತವೆಂದು ಅಲ್ಲಗಳೆದಿದ್ದಾರೆ. ಇಷ್ಟೇಕೆ? ಶ್ರೀಪತಿ ಪಂಡಿತರಂತೆ ಸ್ವಯಂ ಶ್ರೀರಾಮಾನುಜರೂ ಕೂಡ ಶ್ರೀಕಂಠ ಭಾಷ್ಯವನ್ನು ಸರ್ವಾತ್ಮನಾ ಅನುಸರಿಸಿದ್ದಾರೆ. "ಶ್ರೀಕಂಠಭಾಷ್ಯ ಮತ್ತು ಶ್ರೀ ಭಾಷ್ಯಗಳಲ್ಲಿ ಶಿವ ಮತ್ತು ವಿಷ್ಣು ಎಂಬ ಪದಗಳ ವ್ಯತ್ಯಾಸವೇ ಹೊರತು ಉಳಿದ ಪಂಕ್ತಿಕೆಯೆಲ್ಲವೂ ಒಂದೇ!" ಎಂಬುದು ವಿದ್ವಾಂಸರಿಗೆ ತಿಳಿಯದ ವಿಷಯವೇನಲ್ಲ ಎಂಬುದನ್ನು ನನ್ನ ಭೂಮಿಕೆ (ಪು. ೧೮೪) ಯಲ್ಲಿ ಸ್ಪಷ್ಟಪಡಿಸಲಾಗಿದೆ.

ಶ್ರೀಕಂಠಭಾಷ್ಯದಲ್ಲಿ ಬರುವ ಬ್ರಹ್ಮನ ಸಗುಣತ್ವ, ಸತ್ಕಾರ್ಯವಾದ, ಕಾರ್ಯಕಾರಣಗಳಿಗೆ ಅಪೃಥಕ್ ಸಿದ್ಧತ್ವ, ಅಂತರ್ಗಣಿಕ ಭೇದ, ಮುಂತಾದವು ಶ್ರೀ ಭಾಷ್ಯದಲ್ಲಿಯೂ ಅದೇ ರೂಪದಿಂದ ಅನುವಾದಿಸಲ್ಪಟ್ಟಿವೆ. ಅಲ್ಲಿಯೂ ಸತ್ಕಾರ್ಯವಾದ, ಕಾರ್ಯರೂಪ ಚಿದಚಿತ್ತುಗಳಿಗೆ ಈಶ್ವರನೊಡನೆ ಅಪೃಥಕ್ ಸಿದ್ಧತ್ವ, ಈಶ್ವರನಲ್ಲಿ 'ಸ್ವಗತ ಭೇದ' ಎಂಬ ಅಂತರ್ಗಣಿಕ ಭೇದ ಮುಂತಾಗಿ ಸ್ವೀಕೃತವಾಗಿವೆ.

ಶ್ರೀಕಂಠ ಭಾಷ್ಯದಲ್ಲಿ "ಅಥ ಶಬ್ದ ವಿವರಣದಲ್ಲಿ ಹೇಳಿರುವ ಪೂರ್ವೋತ್ತರ ಮೀಮಾಂಸೆಗಳಿಗೆ ಏಕ ಶಾಸ್ತ್ರತ್ವ ನಿರ್ವಚನವನ್ನು ಶ್ರೀ ಭಾಷ್ಯವೂ ಅನುಮೋದಿಸಿದೆ." 'ಮುಕ್ತೋಪಸೃಪ್ಯವ್ಯಪದೇಶಾತ್' (೧-೩-೨) 'ಅತ್ತಾಚರಾಚರಗ್ರಹಣಾತ್' (೧-೨-೯) 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' (೧-೨ ೧೧) ಮುಂತಾದ ನೂರಾರು ಸೂತ್ರ ಭಾಷ್ಯಗಳಲ್ಲಿರುವ ಹೋಲಿಕೆಗಳನ್ನು ಗಮನಿಸಿದಲ್ಲಿ ಯಾವ ಭಾಷ್ಯವೂ ತನ್ನ ಹಿಂದಿನ ಭಾಷ್ಯದ 'ಕೃತಿ ಋಣ' ದಿಂದ ಪಾರಾಗಿಲ್ಲವೆಂಬುದು ಸಿದ್ಧವಾಗುತ್ತದೆ. ಆದ್ದರಿಂದ ಶ್ರೀಕರಭಾಷ್ಯದ ಮೇಲೆ ಮಾಡಿರುವ 'ಕೃತಿಚೌರ್ಯ' ಎಂಬ ಆಪಾದನವು ಅಭಿಜ್ಞರು ಮಾಡುವಂತಹುದಲ್ಲವೆಂದು ಯಾರಿಗಾದರೂ ಹೊಳೆದೀತು.!

೩

ಮಾನ್ಯ ನಿರ್ದೇಶಕರು ಹೇಳಿರುವ ಒಂದು ಮಾತು ನಿಜ. ಅದೇನೆಂದರೆ "ಶ್ರೀಕರ ಭಾಷ್ಯದಲ್ಲಿ ಹೇಳಿರುವ ವೀರಶೈವ ಧರ್ಮವು ಬಸವಾದಿ ಶಿವ ಶರಣರ ತರುವಾಯ ರೂಪುಗೊಂಡ ವೀರಶೈವ ಸ್ವರೂಪದ್ದಲ್ಲ" ಎಂಬುದು. ಇದನ್ನು ನನ್ನ ಪೀಠಿಕೆ (ಪು. ೧೧೨-೧೧೩) ಯಲ್ಲಿಯೇ ಸೂಚಿಸಲಾಗಿದೆ. "ಶ್ರೀಕರ ಭಾಷ್ಯದಲ್ಲಿ ಕ್ರಿ. ಶ. ೧೨ನೆಯ ಶತಮಾನದ ಬಸವಾದಿ ಶಿವಶರಣರು ಶಾಸ್ತ್ರ ಮತ್ತು ಅನುಭವಗಳಿಂದ ಪ್ರತಿಪಾದಿಸಿದ ಪರಿಷ್ಕೃತ ಪ್ರಗತಿಪರವಾದ ವೀರಶೈವ ಸಾಮಾಜಿಕ–ಆಚಾರ ವಿಚಾರಗಳು ಕಾಣದಿರುವುದರಿಂದ ಶ್ರೀಪತಿಯು ಬಸವಾವತಾರಕ್ಕಿಂತ ಹಿಂದೆಯೇ ಶ್ರೀಕರಭಾಷ್ಯವನ್ನು ಬರೆದಿರುವ" ನೆಂಬ ನಮ್ಮ ಆಶಯವನ್ನೇ ಇವರೂ ಸೂಚಿಸಿದ್ದಾರೆ.

ಶ್ರೀಕರಭಾಷ್ಯದಲ್ಲಿ ವೀರಶೈವದ ಮುಖ್ಯ ತತ್ತ್ವಗಳಾದ ಅಷ್ಟಾವರಣ—ಪಂಚಾಚಾರ ಮತ್ತು ಷಟ್ಸ್ಥಲಗಳ ಸ್ಥೂಲಸ್ವರೂಪವಿದೆಯೇ ಹೊರತು, ಅದರ ಪರಿಷ್ಕೃತ ಸ್ವರೂಪವಿಲ್ಲವೆಂಬುದನ್ನು ಮರೆ ಮಾಚಲಾಗುವುದಿಲ್ಲ. ಏಕೆಂದರೆ ಕ್ರಿ. ಶ. ೧೪ ನೆಯ ಶತಮಾನದ ತರುವಾಯದವುಗಳೆಂದು ಹೇಳಲಾಗಿರುವ ಮಗ್ಗೆ ಮಾಯಿ ದೇವಾಚಾರ್ಯ (೧೪೩೦) ರ ಅನುಭವ ಸೂತ್ರ ಮತ್ತು ವಿಶೇಷಾರ್ಥ ಪ್ರಕಾಶಿಕೆ ಮುಂತಾದವು

ಗಳಲ್ಲಿ ಉಕ್ತವಾದ ಸಿದ್ಧಾಂತ ಸ್ವರೂಪವನ್ನು ಶ್ರೀಕರ ಭಾಷ್ಯದಲ್ಲಿ ಕಾಣಲಾಗುವುದಿಲ್ಲ. ೧೪ನೇ ಶತಕದ ತರುವಾಯ ಈ ಶ್ರೀಪತಿಯು ಇದ್ದ ಪಕ್ಷದಲ್ಲಿ ಖಂಡಿತವಾಗಿಯೂ ಈತ ಅವನ್ನು ತನ್ನ ಭಾಷ್ಯದಲ್ಲಿ ಹೇಳದೆ ಬಿಡುತ್ತಿರಲಿಲ್ಲ.

ಶ್ರೀಕರ ಭಾಷ್ಯದಲ್ಲಿ ಶಿಖಾಯಜ್ಞೋಪವೀತ ಧಾರಣೆಯ ಬಗೆಗೆ ಹೇಳಿರುವ ವಿಕಲ್ಪತ್ವದ ಕಲ್ಪನೆಯನ್ನೂ ಮಗ್ಗೆ ಮಾಯಿ ದೇವರ ಕೃತಿಗಳಲ್ಲಿ ಕಾಣಲಾಗುವುದಿಲ್ಲ. ಇನ್ನು ಶ್ರೀಕರಭಾಷ್ಯದಲ್ಲಿ ಹೇಳಿರುವ ಆಚಾರಾದಿ ಲಿಂಗಗಳು ಮುಂತಾದುವನ್ನು ನನ್ನ ಭೂಮಿಕೆ (೧೬೦–೧೬೭) ಯಲ್ಲಿ ವಿಸ್ತಾರವಾಗಿ ವಿವೇಚಿಸಲಾಗಿದೆ. ಆದರೆ ಅದೆಲ್ಲವೂ ವೀರಶೈವದ ಸ್ಥೂಲ ಸ್ವರೂಪವೇ ಹೊರತು ಅದು ಪರಿಪೂರ್ಣರೂಪದ್ದಲ್ಲ. ಶ್ರೀಕರ ಭಾಷ್ಯದಲ್ಲಿ ಅಷ್ಟಾವರಣಗಳ ಬಗೆಗೆ ಮಾಡಿರುವ ವೈದಿಕತ್ವ ಪ್ರತಿಪಾದನೆಯನ್ನು ಅನಂತರದ ಗ್ರಂಥಗಳಾದ ಕ್ರಿಯಾಸಾರ (೧೪೦೦) ವೀರ ಶೈವಾನಂದ ಚಂದ್ರಿಕೆ (೧೭೫೦) ಮತ್ತು ಲಿಂಗಧಾರಣ ಚಂದ್ರಿಕೆ (೧೭೦೦) ಮುಂತಾದ ಗ್ರಂಥಗಳಲ್ಲಿ ವಿಸ್ತರಿಸಲಾಗಿರುವುದನ್ನೂ ಭೂಮಿಕೆಯಲ್ಲಿ ಸ್ಪಷ್ಟಪಡಿಸಲಾಗಿದೆ.

ಕಡೆಯದಾಗಿ ಅಪಶೂದ್ರಾಧಿಕರಣಕ್ಕೆ ಬರೆದಿರುವ ಶ್ರೀಕರಭಾಷ್ಯದಲ್ಲಿ "ಶೂದ್ರರಿಗೆ ಬ್ರಹ್ಮ ವಿದ್ಯಾಧಿಕಾರವಿಲ್ಲ ಎಂದು ಇತರ ಭಾಷ್ಯಗಳಲ್ಲಿರುವಂತೆಯೇ ಹೇಳಿದೆ" ಎಂಬ ವಿಷಯದಲ್ಲಿ ಒಂದು ಮಾತು ಕೇಳ ತಕ್ಕದ್ದಿದೆ. ಏಕೆಂದರೆ ಭೂಮಿಕೆಯಲ್ಲಿ (ಪು. ೧೧೫–೧೧೭) ಹೇಳಿರುವಂತೆ ಇದೇ ಭಾಷ್ಯದಲ್ಲಿ 'ಪ್ರಮಿತಾಧಿಕರಣ' ಮತ್ತು 'ವಿಧುರಾಧಿಕರಣ' ಗಳಲ್ಲಿ ವೀರಶೈವನನ್ನು 'ಅತ್ಯಾಶ್ರಮಿ' ಎಂದು ಹೇಳಿ, ಅಲ್ಲಿ ಆಚಾರ್ಯರು ಎಲ್ಲ ವರ್ಣ ಮತ್ತು ಆಶ್ರಮಗಳವರಿಗೂ ಲಿಂಗಧಾರಣವನ್ನು ವಿಧಿಸಿರುವುದನ್ನು ಗಮನಿಸ ಬೇಕು. ಅಪಶೂದ್ರಾಧಿಕರಣದಲ್ಲಿ ಹೇಳಿರುವ "ಶೂದ್ರ" ಎಂಬುದು "ಶುಚಾ ದ್ರವತೀತಿ ಶೂದ್ರಃ" ಎಂದರೆ 'ದುಃಖಿ' ಅಥವಾ 'ಭವಿ' ಎಂಬ ವೀರಶೈವ ಪಾರಿಭಾಷಿಕವಾದ ಪದವೇ ಹೊರತು ಅದು ಈಗ ಬಳಕೆಯಲ್ಲಿರುವ ಜಾತಿ ಶೂದ್ರರಿಗೆ ಅನ್ವಯಿಸುವುದಿಲ್ಲವೆಂಬುದು ಸೂರ್ಯ ಪ್ರಕಾಶದಷ್ಟು ಸ್ಪಷ್ಟ. ಸೂತ್ರ ಪ್ರಯುಕ್ತವಾದ "ಶೂದ್ರ" ಪದಕ್ಕೆ "ಸಂಸ್ಕಾರ ಹೀನ" ಎಂದು ಅರ್ಥ. ಅದಕ್ಕೆ ಭೂಮಿಕೆಯಲ್ಲಿ (ಪು. ೨೮) ಹೇಳಿರುವಂತೆ "ಪಾತಕಾಧಮತ್ವಾದಿ ಲಕ್ಷಣಗಳಿಂದ ಕೂಡಿದ ಅಜ್ಞತ್ವ, ಮೂರ್ಖತ್ವ ಮುಂತಾದ ದುರ್ಲಕ್ಷಣಗಳುಳ್ಳವನೇ ಶೂದ್ರ" ಎಂಬ ಅರ್ಥವು ಸಿದ್ಧವಾಗುವುದರಿಂದಲೂ ಅಂಥವನಿಗೆ ಬ್ರಹ್ಮ ವಿದ್ಯೆಯಿಂದ ಯಾವ ಪ್ರಯೋಜನವೂ ಆಗದಿರುವುದರಿಂದಲೂ ಅವನಿಗೆ ಬ್ರಹ್ಮ ವಿದ್ಯಾಧಿಕಾರದ ಅಗತ್ಯ ಇರುವುದಿಲ್ಲವೆಂಬುದು ಆಚಾರ್ಯರ ಅಭಿಪ್ರಾಯ. ಆದರೆ ಈ ಸಂದರ್ಭದಲ್ಲಿ ಇತರ ಆಚಾರ್ಯರು "ಯಾವ ಬಗೆಯ ಶೂದ್ರನೇ ಆಗಲಿ ಅವನಿಗೆ ದ್ವಿಜತ್ವಕ್ಕೆ ಕಾರಣವಾದ ಉಪನಯನವಿಲ್ಲದ್ದರಿಂದ ಅವನು ಸರ್ವಥಾ ಬ್ರಹ್ಮವಿದ್ಯೆಗೆ ಅರ್ಹನಲ್ಲ" ಎನ್ನುತ್ತಾರೆ. ಆದರೆ ಬ್ರಹ್ಮ ವಿದ್ಯೆಗೆ "ಶಕ್ತಿ ಪಾತ" (ಶಿವಕೃಪೆ) ವು ಅಗತ್ಯವೆನ್ನುವ ವೀರ ಶೈವವು ಮಾತ್ರ ಶಿವ ಕೃಪೆಗೆ ಪಾತ್ರರಾದ ಬೇಡರ ಕಣ್ಣಪ್ಪ, ಹರಳಯ್ಯ, ಚನ್ನಯ್ಯ, ಮುಂತಾದವರೆಲ್ಲರಿಗೂ 'ಶಕ್ತಿಪಾತ' ವಾಗಿರುವುದರಿಂದ ಅವರೂ ಬ್ರಹ್ಮ ವಿದ್ಯೆಗೆ ಅಧಿಕಾರಿಗಳೇ ಎಂದು ಸಿದ್ಧಮಾಡಿರುವ ಅಂಶವನ್ನೇ ನನ್ನ ಭೂಮಿಕೆಯಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ.

ಒಟ್ಟಿನಲ್ಲಿ ಶ್ರೀಕರಭಾಷ್ಯವು ಬಸವಪೂರ್ವಯುಗದ ವೀರಶೈವ ಸ್ವರೂಪವನ್ನು ನಿರ್ದೇಶಿಸಿದ್ದರೂ ಕೂಡ ಇದು ಅಪಶೂದ್ರಾಧಿಕರಣ, ಬ್ರಹ್ಮವಿದ್ಯಾಧಿಕಾರಿ ನಿರ್ಣಯ ಮುಂತಾದ ವಿಷಯಗಳಲ್ಲಿ ಸನಾತನ ವೈದಿಕ ಧರ್ಮವನ್ನು ಎತ್ತಿ ಹಿಡಿದು ಪ್ರಗತಿಪರವಾದ ವಿವೇಚನೆಯನ್ನು ಮಾಡಿರುವುದರಿಂದ ವೀರಶೈವಕ್ಕೆ ಈ ಭಾಷ್ಯಕ್ಕಿಂತ ಪ್ರಮಾಣ ಭೂತವಾದ ಮತ್ತೊಂದು ಪ್ರಾಚೀನ ಭಾಷ್ಯವು ದೊರೆಯುವುದಿಲ್ಲವೆಂಬುದನ್ನು ಘಂಟಾ ಘೋಷವಾಗಿ ಹೇಳಬಹುದು ಎಂದು ಮಾತ್ರ ಹೇಳಿ ಈ ಸಮೀಕ್ಷೆಯನ್ನು ವಿರಮಿಸಲಾಗಿದೆ.

ಸಿದ್ಧಾರ್ಥಿ ಸಂ|| ಶ್ರಾವಣ ಶು. ೨ ಬುಧವಾರ
೨೫–೭–೭೯
ಮೈಸೂರು.

ಎಂ. ಜಿ. ನಂಜುಂಡಾರಾಧ್ಯ

# ಶ್ರೀಕರಭಾಷ್ಯ ಕರ್ತೃ— ? ಒಂದು ಸಮೀಕ್ಷೆ

ಬಸವಪಥ (ಫೆಬ್ರುವರಿ ೧೯೮೦) ಮತ್ತು (ಏಪ್ರಿಲ್ ೧೯೮೦) ಸಂಚಿಕೆಗಳಲ್ಲಿ 'ವೀರಶೈವಕ್ಕೆ ಶೈವಪಾಶುಪತ ಮಾಹೇಶ್ವರರ ಕೊಡುಗೆ' ಎಂಬ ಶೀರ್ಷಿಕೆಯಲ್ಲಿ ನ್ಯಾಯ ಮೂರ್ತಿ ಮಾನ್ಯ ಶ್ರೀ ಟಿ. ಎನ್. ಮಲ್ಲಪ್ಪನವರು 'ಶ್ರೀಕರಭಾಷ್ಯ ಕರ್ತೃ ಶ್ರೀಪತಿ ಪಂಡಿತರ ಮತ ಸಿದ್ಧಾಂತ ವಿವೇಚನೆ' ಮತ್ತು "ಶ್ರೀಪತಿ ಪಂಡಿತಾಚಾರ್ಯರ ಮತ-ದೇಶ-ಕಾಲಾದಿಗಳ ಸಮೀಕ್ಷೆ" ಎಂಬ ಎರಡು ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಆ ಬಗೆಗೆ ಒಂದೆರಡು ಮಾತು ಹೇಳುವುದು ಅಗತ್ಯ.

ಶ್ರೀಯುತರು ತಮ್ಮ ಲೇಖನಗಳಲ್ಲಿ 'ಶ್ರೀಕರ ಭಾಷ್ಯ ಕರ್ತೃ ಶ್ರೀಪತಿಯು, ವೀರ ಶೈವ ಪಂಡಿತ ತ್ರಯೋಕ್ತ ಶ್ರೀಪತಿ ಪಂಡಿತಾರಾಧ್ಯರಿಗಿಂತ ಭಿನ್ನ' ಎಂಬುದನ್ನು ಮುಖ್ಯ ವಾಗಿ ಉಲ್ಲೇಖಿಸಿ, ಆ ಬಗೆಗೆ ಕೆಲವು ಕಾರಣಗಳನ್ನು ಮುಂದಿಟ್ಟಿದ್ದಾರೆ. ಅವುಗಳನ್ನು ಹೀಗೆ ಸಂಗ್ರಹಿಸಬಹುದು.

"ಶ್ರೀಕರ ಭಾಷ್ಯದಲ್ಲಿ ಶ್ರೀ ರಾಮಾನುಜರ ಭಾಷ್ಯ ಖಂಡನೆ ಇದೆ, ಶ್ರೀ ರಾಮಾನುಜರು (ಕ್ರಿ. ಶ. ೧೧೩೭) ರಲ್ಲಿ ಪರಂಧಾಮವನ್ನೈದಿದರು. ಇವರು ಸಂಸಾರ ದಲ್ಲಿ ಜಿಗುಪ್ಸೆ ಹೊಂದಿ ಸಂನ್ಯಾಸವನ್ನು ಸ್ವೀಕರಿಸಿ, ಒಬ್ಬರಾದ ಮೇಲೆ ಒಬ್ಬರಂತೆ ಮೂವರು ಗುರುಗಳನ್ನು ಆಶ್ರಯಿಸಿ, ಜ್ಞಾನ ಸಿದ್ಧಿಯನ್ನು ಪಡೆದ ಮೇಲೆ ತಮಗೆ ಭಾಷ್ಯ ಬರೆಯಲು ಆಧಾರವಾದ ಬೋಧಾಯನ ವೃತ್ತಿಯು ತಾವಿದ್ದ ದೇಶದಲ್ಲೆಲ್ಲಿಯೂ ದೊರೆಯದುದರಿಂದ ಕಾಶ್ಮೀರದವರೆಗೂ ಹೋಗಿ ಅಲ್ಲಿ ಅದು ದೊರೆಯಲು ಅದರ ಆಧಾರದಿಂದ ಶ್ರೀ ಭಾಷ್ಯವನ್ನು ಬರೆದರು. ಆದುದರಿಂದ ಅವರ ಶ್ರೀ ಭಾಷ್ಯವು ಅವರ ಇಳಿವಯಸ್ಸಿನಲ್ಲಿಯೇ ರಚಿತವಾಗಿರಬೇಕು. ಮುದ್ರಣವಿಲ್ಲದ ಆ ಕಾಲದಲ್ಲಿ ಶ್ರೀಕರ ಭಾಷ್ಯದಲ್ಲಿ ಖಂಡಿಸಲ್ಪಡುವಷ್ಟು ಶ್ರೀ ಭಾಷ್ಯವು ಪ್ರಸಿದ್ಧಿಗೆ ಬರಬೇಕಾದರೆ ನೂರಾರು ವರ್ಷಗಳು ಕಳೆದಿರಬೇಕು. ಆದುದರಿಂದ ಶ್ರೀಕರ ಭಾಷ್ಯವು ೧೧ನೆಯ ಶತಮಾನದ ಶ್ರೀಪತಿಯಿಂದ ರಚಿತವಾಗಿರಲಾರದು ಎಂಬುದು ಸ್ಪಷ್ಟ" ಎಂದಿದ್ದಾರೆ.

ಈ ಮಾತು ಸಾಮಾನ್ಯವಾಗಿ ಎಲ್ಲರೂ ಒಪ್ಪತಕ್ಕದ್ದೆ. ಆದರೆ ಇದು ಶ್ರೀ ರಾಮಾ ನುಜರ ಜೀವನ ಚರಿತ್ರೆಗೆ ಎಷ್ಟರಮಟ್ಟಿಗೆ ಅನ್ವಯಿಸುತ್ತದೆ ಎಂದು ವಿಚಾರ ಮಾಡ ಬೇಕು. ಏಕೆಂದರೆ, ಶ್ರೀ ರಾಮಾನುಜರ ಜೀವಿತ ಕಾಲವನ್ನು ಕ್ರಿ. ಶ. ೧೦೧೭ ರಿಂದ

೧೧೩೭ ಎಂದರೆ ಅವರು ಒಂದು ನೂರು ಇಪ್ಪತ್ತು ವರುಷಗಳು ಬದುಕಿದ್ದರೆಂದು ಹೇಳಲಾಗಿದೆ.

ಶ್ರೀ ರಾಮಾನುಜರು 'ಆಳವಂದಾರ್' ಎಂದು ಪ್ರಸಿದ್ಧರಾದ ಯಾಮುನಾಚಾರ್ಯರ ಪೌತ್ರ ಶ್ರೀ ಶೈಲಪೂರ್ಣರ ತಂಗಿಯ ಮಗ. ಯಾಮುನಾಚಾರ್ಯರು ಕ್ರಿ.ಶ. ೯೨೩ ರಲ್ಲಿ ಶ್ರೀರಂಗದಲ್ಲಿ ಆಚಾರ್ಯ ಪೀಠವನ್ನು ಅಲಂಕರಿಸಿದರು. ಇವರು ಗೀತಾರ್ಥಸಂಗ್ರಹ ಮೊದಲಾದ ಆರು ಗ್ರಂಥಗಳನ್ನು ಬರೆದಿದ್ದಾರೆ.

"ಶ್ರೀ ರಾಮಾನುಜರು ಸಂಸಾರದಲ್ಲಿ ಜಿಗುಪ್ಸೆ ಹೊಂದಿ ಸಂನ್ಯಾಸವನ್ನು ಸ್ವೀಕರಿಸಿ, ಒಬ್ಬರಾದ ಮೇಲೆ ಒಬ್ಬರಂತೆ ಮೂವರು ಗುರುಗಳನ್ನು ಆಶ್ರಯಿಸಿ, ಜ್ಞಾನ ಸಿದ್ಧಿಯನ್ನು ಪಡೆದರು'. ಎಂಬುದಕ್ಕಿಂತ ಅವರು ಅನೇಕ ಗುರುಗಳಲ್ಲಿ ಜ್ಞಾನಾರ್ಜನೆ ಮಾಡಿ ಸಂಸಾರಿಗಳಾಗಿದ್ದು, ಅದರಲ್ಲಿ ಜಿಗುಪ್ಸೆ ಪಡೆದು ಅನಂತರ ಸಂನ್ಯಾಸಿಗಳಾದರೆಂಬುದು" ಸೂಕ್ತವೆನಿಸುತ್ತದೆ. ಹೇಗೇ ಆಗಲಿ ಶ್ರೀ ರಾಮಾನುಜರು ಮೊದಲು ಯಾದವ ಪ್ರಕಾಶ ರೆಂಬ ಆಚಾರ್ಯರಲ್ಲಿ ವೇದಾಂತಾಭ್ಯಾಸವನ್ನು ಆರಂಭಿಸಿದರು. ಆದರೆ ಅವರು ಪ್ರತಿ ಪಾದಿಸುತ್ತಿದ್ದ ಅದ್ವೈತ ಮಾರ್ಗ ಶ್ರೀ ರಾಮಾನುಜರಿಗೆ ಹಿಡಿಸಲಿಲ್ಲ. ಆದ್ದರಿಂದ ಅವರನ್ನುಕೈ ಬಿಟ್ಟು ಇತರ ಅನೇಕ ಆಚಾರ್ಯರಲ್ಲಿ ಅಭ್ಯಾಸ ಮುಂದುವರೆಸಿದರು. ಇವರಲ್ಲಿ ಕಾಂಚೀಪೂರ್ಣರು, ಗೋಷ್ಠೀಪೂರ್ಣರು ಮಹಾಪೂರ್ಣರು, ಮಾಲಾಧರರು ಮತ್ತು ಶ್ರೀಶೈಲಪೂರ್ಣರು ಮುಖ್ಯರು. ಶ್ರೀಶೈಲಪೂರ್ಣರು ತಮ್ಮ ತಾಯಿಯ ಸಹೋದರರೇ ! ಆದರೂ ಶ್ರೀ ರಾಮಾನುಜರಿಗೆ ತಮ್ಮ ಮುತ್ತಾತಂದಿರಾದ ಯಾಮುನಾ ಚಾರ್ಯರೇ ಪರಮ ಗುರುಗಳು. ಅವರ ಗ್ರಂಥಗಳ ಆಧಾರದ ಮೇಲೆ ತಮ್ಮ ಸೋದರ ಮಾವಂದಿರಾದ ಶ್ರೀ ಶೈಲಪೂರ್ಣರ ಮಾರ್ಗದರ್ಶನದಲ್ಲಿ ಅವರು ಅಭಿನಿವೇಶ ಹೊಂದಿ ದ್ದರು. ಆದ್ದರಿಂದ ಶ್ರೀ ರಾಮಾನುಜರ ಶ್ರೀಭಾಷ್ಯದ ರಚನೆಗೆ ಯಾಮುನಾಚಾರ್ಯರ ಗ್ರಂಥಗಳು ಮುಖ್ಯ ಪ್ರೇರಕ. ಆದ್ದರಿಂದಲೇ ಅವರಿಗೆ ಇತರ ಆಚಾರ್ಯರುಗಳ ಪ್ರತಿ ಪಾದನೆಗಳು ಹಿಡಿಸದಿದ್ದುದು. ಪ್ರಖರ ಪಾಂಡಿತ್ಯ ನಿಶಿತ ಮೇಧಾಶಕ್ತಿ ಮತ್ತು ವಯಸ್ಸಿನ ಹುಮ್ಮಸ್ಸುಗಳು ಎಂಥವರನ್ನು ವಿಜೃಂಭಿಸುವಂತೆ ಮಾಡಬಲ್ಲವು ಎಂಬುದಕ್ಕೆ ಇದೂ ಒಂದು ನಿದರ್ಶನ. ಅವರು ಬೇರೆ ಬೇರೆ ಪಂಡಿತರನ್ನು ಆಶ್ರಯಿಸಿದ್ದು ಪ್ರಾಯಃ ತಮ್ಮ ವಾದದೃಢೀಕರಣ ದೃಷ್ಟಿಯಿಂದಲೇ ಹೊರತು ವಿಷಯ ಗ್ರಹಣ ದೃಷ್ಟಿಯಿಂದೇ ನಲ್ಲ. ಏಕೆಂದರೆ ಅವರು ತಮ್ಮ ಸಿದ್ಧಾಂತವನ್ನು ಮೊದಲೇ ನಿರ್ಧರಿಸಿಬಿಟ್ಟಿದ್ದರು ಎಂಬುದು ಇದರಿಂದ ವೇದ್ಯವಾಗುತ್ತದೆ.

ಎರಡನೆಯದಾಗಿ ಶ್ರೀ ರಾಮಾನುಜರು ವಿಷ್ಣುಸರ್ವೋತ್ತಮತ್ವವನ್ನು ಸ್ಥಾಪಿಸುವ, ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸುವ ಭರದಲ್ಲಿ ಶೈವ ಸಿದ್ಧಾಂತ ಮತ್ತು ಶೈವ ಮತ

ವನ್ನು ಬಹುವಾಗಿ ದೂಷಿಸುತ್ತಿದ್ದಿರಬೇಕು. ಅಷ್ಟಕ್ಕೇ ಬಿಡದೆ ಅವರು ಪ್ರಸಿದ್ಧ ಶೈವಕ್ಷೇತ್ರವೆನಿಸಿದ್ದ ತಿರುಪತಿಯನ್ನು ಹೇಗೋ ಆಕ್ರಮಿಸಿಕೊಂಡು ಅಲ್ಲಿಯ ಮೂಲ ವಿಗ್ರಹ ವೀರೇಶನನ್ನು ವೇಂಕಟೇಶ್ವರನನ್ನಾಗಿ ಪರಿವರ್ತಿಸಿದ್ದು ಅಂದಿನ ಸಮಾಜ ದಲ್ಲಿ ಅವರ ಬಗೆಗೆ ಅಸಹನೆ ಮೂಡಿಸಲು ಕಾರಣವಾಗಿರಬೇಕು. ಇದರ ಫಲವಾಗಿಯೇ ಕಂಚಿಯ ದೊರೆ ಶಿವಭಕ್ತನಾದ ಚೋಳರಾಜನು ಇವರನ್ನು ಅಲ್ಲಿಂದ ಓಡಿಸುವಷ್ಟು ಕ್ರುದ್ಧ ನಾದದ್ದು ಸ್ವಾಭಾವಿಕ. ಇದೇ ಕಾರಣದಿಂದಾಗಿ ಅವರ ಕೈಹಿಡಿದ ಪತ್ನಿಯಿಂದಲೂ ವಿರಸವೇರ್ಪಟ್ಟು ಆಕೆಯಿಂದ ಬಿಡುಗಡೆ ಹೊಂದಿ, ಸಂನ್ಯಾಸವನ್ನು ಸ್ವೀಕರಿಸಿರುವುದು ಸಂಭವ. ಶ್ರೀ ರಾಮಾನುಜರಿಗೆ ಕರ್ಣಾಟಕದ ರಾಜ ವಿಷ್ಣುವರ್ಧನ ಸು(೧೦೯೦) ಶಿಷ್ಯನಾಗಿದ್ದ ಶ್ರೀ ರಾಮಾನುಜರು ಚೋಳರಾಜನ (೧೦೯೩) ಕಿರುಕುಳವನ್ನು ತಡೆಯ ಲಾರದೆ ತಲೆ ಮರೆಸಿಕೊಂಡು ಮೈಸೂರು ಸಮೀಪದ ತೊಂಡನೂರು (ಮೇಲುಕೋಟೆ) ಎಂಬಲ್ಲಿಗೆ ಸು ೧೦೯೮ ರಲ್ಲಿ ಬಂದು ನೆಲಸಿದ್ದು, ಕ್ರಿ.ಶ. ಸು. ೧೧೩೭ ರಲ್ಲಿ ಪರಂಧಾಮ ವನ್ನೈದಿರಬೇಕು. ಇದು ಶ್ರೀ ರಾಮಾನುಜರ ಜೀವನದ ಸಂಕ್ಷಿಪ್ತ ಪರಿಚಯ.

ಈ ಅವಧಿಯಲ್ಲಿ ಶ್ರೀರಾಮಾನುಜರು ತಮ್ಮ ಇಳಿ ವಯಸ್ಸಿನಲ್ಲಿ ಕಾಶ್ಮೀರದ ವರೆಗೂ ಹೋಗಿ ಬೋಧಾಯನ ವೃತ್ತಿಯನ್ನು ಸಂಪಾದಿಸಿ, ಅದರ ಆಧಾರದ ಮೇಲೆ ಶ್ರೀಭಾಷ್ಯವನ್ನು ರಚಿಸಿದರೆಂಬುದು ಕೇವಲ ಪ್ರತೀತಿ. ಏಕೆಂದರೆ ಬೋಧಾಯನ ವೃತ್ತಿಯೆಂಬುದು ಈವರೆಗೂ ಎಲ್ಲಿಯೂ ಲಭ್ಯವಾಗಿಲ್ಲ. ಶ್ರೀಭಾಷ್ಯ ರಚನೆಗೆ ಆ ಮೊದಲೇ ಅವರಿಗೆ ಸೂಕ್ತ ಆಧಾರಗಳು ಸಿದ್ಧವಾಗಿದ್ದವು. ಶ್ರೀಭಾಷ್ಯಕ್ಕೆ ಬೋಧಾಯನ ವೃತ್ತಿ ಒಂದೇ ಅಲ್ಲದೆ ಟಂಕ, ಗುಹದೇವ, ಕಪರ್ದಿ ಮತ್ತು ಭಾರುಚಿ ಮುಂತಾದವರ ವ್ಯಾಖ್ಯಾನಗಳೂ ಆಧಾರವೆನ್ನಲಾಗಿದೆ.

ತಾವು ಒಪ್ಪಿಕೊಂಡಿದ್ದ ಪ್ರಮೇಯಗಳ ಆಧಾರದ ಮೇಲೆ ರಚಿತವಾಗಿದ್ದ ಭಾಷ್ಯವನ್ನು ಕುರಿತೇ ಇವರು ಇತರ ಆಚಾರ್ಯರಲ್ಲಿ ವಿದ್ವತ್ ಸಭೆಗಳಲ್ಲಿ ವಾಕ್ಯಾರ್ಥ ವನ್ನು ಮಾಡುತ್ತಿದ್ದುದರಿಂದಲೂ, ಶ್ರೀ ರಾಮಾನುಜರ ಶಿಷ್ಯರಲ್ಲಿ ಮುಖ್ಯರಾದ ಶ್ರೀ ವತ್ಸಾಂಕಚಿಹ್ನಮಿಶ್ರರು (ಕೂರೇಶ) ಶ್ರೀಭಾಷ್ಯ ವಿಚಾರಗಳನ್ನು ಗುರುಮುಖ ದಿಂದ ಕೇಳಿ, ಬರೆದುಕೊಂಡು "ಶ್ರುತ ಪ್ರಕಾಶ" ಎಂದರೆ ಶ್ರುತವಾದುದನ್ನು ಇತರತ್ರ ಪ್ರಕಾಶ ಪಡಿಸುತ್ತಿದ್ದುದರಿಂದಲೂ ಶ್ರೀ ಭಾಷ್ಯದ ವಿಚಾರಗಳು ಸುಮಾರು ಅವರ ವಯ ಸ್ಸಿನ ಮೂವತ್ತು ಮೂವತ್ತೈದರ ವೇಳೆಗಾಗಲೇ ಜಗಜ್ಜಾಹೀರಾಗಿದ್ದುದು (ಕ್ರಿ.ಶ. ಸು. ೧೦೫೦) ಸಂಭವ. ಇದರಿಂದ "ಶ್ರೀಭಾಷ್ಯವು" ಗ್ರಂಥ ರೂಪವಾಗಿ ಹೊರಬೀಳುವುದಕ್ಕೆ ಮುಂಚೆಯೇ ಅದರ ಮುಖ್ಯ ಪ್ರಮೇಯಗಳು ಪ್ರಕಟವಾಗಿದ್ದುದು ಅಸಂಭವವೆನಿಸದು.

ಅಂದಮೇಲೆ ಶ್ರೀರಾಮಾನುಜರ ಬಗೆಗೆ ಮತ್ತು ಅವರ ಭಾಷ್ಯ ಪ್ರಮೇಯಗಳ ಬಗೆಗೆ ಅಗ್ಗೆ ಶೈವ ವಿದ್ವಾಂಸರ ಪ್ರಬಲ ವಿರೋಧವು ಸಿಡಿದೆದ್ದಿದ್ದರಲ್ಲಿ ಸಂದೇಹವಿಲ್ಲ ಪ್ರಾಯಃ ಶ್ರೀರಾಮಾನುಜರಿಗೆ ಕಿರಿಯ ಸಮಕಾಲೀನರಾಗಿದ್ದ ಶ್ರೀಪತಿಪಂಡಿತ,

ಮಂಚಣ ಪಂಡಿತರೂ (೧೧೬೦) ಅವರ ತರುವಾಯ ಮಲ್ಲಿಕಾರ್ಜುನ ಪಂಡಿತರೂ (೧೧೬೧) ಸಂಸ್ಕೃತದಲ್ಲಿ ಭಾಷ್ಯಗಳನ್ನು, ವಾದಗ್ರಂಥಗಳನ್ನು ಬರೆದದ್ದೂ ಈ ದೃಷ್ಟಿಯಿಂದಲೇ ಎಂದು ಕಂಡು ಬರುತ್ತದೆ.

ಶ್ರೀ ರಾಮಾನುಜರಿಗೆ ತೀರ ಹತ್ತಿರದವರಾದ ಶ್ರೀಪತಿ ಪಂಡಿತರು ತಮ್ಮ ಶ್ರೀಕರ ಭಾಷ್ಯದಲ್ಲಿ ಶ್ರೀ ರಾಮಾನುಜರ ಭಾಷ್ಯವನ್ನು ಖಂಡಿಸಿರುವುದಲ್ಲದೆ, ಅವರು ತಿರುಪತಿಯಲ್ಲಿ ನಡೆಸಿದ ಅಕೃತ್ಯವನ್ನು ಕಂಠೋಕ್ತವಾಗಿಯೇ ಉಲ್ಲೇಖಿಸುವ ಅಗತ್ಯ ಕಂಡಿರಬೇಕು. ಶ್ರೀಕರ ಭಾಷ್ಯದ ಆ ಭಾಗ ಹೀಗಿದೆ,— "ವೇಂಕಟೇಶ್ವರಸ್ಯ ಆಭಾಸ ವಿಷ್ಣುತ್ವಂ ತದಂಗೇ ನಾಗಭೂಷಣಾದಿ ಧರ್ಮಾಣಾಂ ದ್ಯೋತನಾತ್ ; ಮೂಲ ವಿಗ್ರಹೇ ಚಕ್ರಾದಿ ಲಾಂಛನಾನಾಮದರ್ಶನಾತ್ ವೀರೇಶ್ವರಸ್ಯ ರಾಮಾನುಜ ಕಲ್ಪಿತ ವೇಂಕಟೇಶ್ವರತ್ವಂ ರಜ್ಜು ಸರ್ಪವದಾಭಾಸಮಾತ್ರಮೇವ" (ಶ್ರೀಕರಭಾಷ್ಯ II. ಪು. ೬೨-೬೩) ಎಂದರೆ "ತಿರುಪತಿಯಲ್ಲಿರುವ ವೆಂಕಟೇಶ್ವರನಲ್ಲಿರುವ ವಿಷ್ಣುತ್ವವು ಕೇವಲ ತೋರಿಕೆ (ಆಭಾಸ). ಏಕೆಂದರೆ ಆ ವಿಗ್ರಹದಲ್ಲಿ ಶಿವತ್ವ ಸೂಚಕವಾದ ನಾಗಭೂಷಣ ಮೊದಲಾದ ಚಿಹ್ನೆಗಳಿವೆ. ವಿಷ್ಣುತ್ವ ಸೂಚಕವಾದ ಚಕ್ರಾಂಕನ ಮುಂತಾದ ಚಿಹ್ನೆಗಳಿಲ್ಲ. ಆದ್ದರಿಂದ ಹಗ್ಗದಲ್ಲಿ ಭ್ರಾಂತಿಯಿಂದ ಹಾವು ತೋರುವಂತೆ ವೀರೇಶ್ವರನಲ್ಲಿ ರಾಮಾನುಜರು ಕಲ್ಪಿಸಿದ ವಿಷ್ಣುತ್ವವು ತೋರುವುದೇ ಹೊರತು ಅಲ್ಲಿ ವಾಸ್ತವಿಕ ವಿಷ್ಣುತ್ವವಿಲ್ಲ." ಎಂಬ ಮಾತು ಇದಕ್ಕೆ ಜ್ವಲಂತ ನಿದರ್ಶನ.

ಈ ಎಲ್ಲ ಕಾರಣಗಳಿಂದ ಶ್ರೀಕರ ಭಾಷ್ಯವು ಶೈವ-ವೈಷ್ಣವ ಜಗಳವು ಪ್ರಬಲವಾಗಿದ್ದ ಮತ್ತು ಒಂದು ಶೈವಕ್ಷೇತ್ರವನ್ನೇ ವೈಷ್ಣವ ಕ್ಷೇತ್ರವನ್ನಾಗಿ ಪರಿವರ್ತಿಸುವಷ್ಟು ದುರಂತವನ್ನು ಮುಟ್ಟಿದ್ದ ಬಿಸಿಯಲ್ಲಿ ರಚಿತವಾದದ್ದರಿಂದಲೇ ಅದರಲ್ಲಿ ಶ್ರೀ ರಾಮಾನುಜರ ಹೆಸರನ್ನು ನಮೂದಿಸಿದ್ದು ಸಂಗತವಾಗುತ್ತದೆ.

ಪಂಡಿತ ಪ್ರಕಾಂಡರೂ, ಮಹಾಪ್ರಾಜ್ಞರೂ ಪವಾಡಪುರುಷರೂ ಎನಿಸಿದ್ದ ಶ್ರೀಪತಿ ಪಂಡಿತರಂತಹವರು ತಮ್ಮ ಸಮಕ್ಷ ನಡೆದ ಈ ಅಪಚಾರವನ್ನು ಪ್ರತಿಭಟಿಸಿ ಖಂಡಿಸಿದ್ದು ಸ್ವಾಭಾವಿಕವೇ ! ಹಾಗಲ್ಲದೆ ಶ್ರೀಯುತರು ಹೇಳುವಂತೆ ಶ್ರೀಕರ ಭಾಷ್ಯವು ಕ್ರಿ. ಶ. ೧೪ ಅಥವಾ ೧೫ ನೆಯ ಶತಮಾನಗಳಲ್ಲಿ ರಚಿತವಾಗಿದ್ದ ಪಕ್ಷದಲ್ಲಿ ಮತ್ತು ಯಾವನೋ ಒಬ್ಬ ಅಪ್ರಸಿದ್ಧ ಶ್ರೀಪತಿ ಅದನ್ನು ಬರೆದಿದ್ದ ಪಕ್ಷದಲ್ಲಿ ಶ್ರೀಕರಭಾಷ್ಯದಲ್ಲಿ ಶ್ರೀರಾಮಾನುಜರ ಹೆಸರನ್ನಾಗಲೀ, ಆ ಭಾಷ್ಯವನ್ನು ಆ ರೀತಿ ಖಂಡಿಸುವ ಅಗತ್ಯವಾಗಲಿ ಏನಿತ್ತು ? ಮೇಲಾಗಿ ೧೪-೧೫ನೆಯ ಶತಮಾನಗಳ ಹೊತ್ತಿಗೆ ಬಸವಾದಿ ಶಿವಶರಣರಿಂದ ಪರಿಷ್ಕೃತವಾದ ವೀರಶೈವ ಎದ್ದುದರಿಂದ ಆಗ ಶ್ರೀಕರಭಾಷ್ಯವು ಪ್ರತಿಪಾದಿಸುವ ವರ್ಣಧರ್ಮದ ಸಮರ್ಥನೆಯಾಗಲಿ, ಶಿಖಾಯಜ್ಞೋಪವೀತಗಳ ಪ್ರಸ್ತಾಪವಾಗಲಿ ಬರುವುದು ಸಾಧ್ಯವೇ

ಶ್ರೀಕರಭಾಷ್ಯದಲ್ಲಿ ಉಲ್ಲಿಖಿತವಾಗಿರುವ ಗ್ರಂಥಗಳು, ಗ್ರಂಥಕಾರರು ಮತ್ತು ಅಲ್ಲಿಯ ಆಚಾರ ವಿಚಾರಗಳು ಬಸವಪೂರ್ವಯುಗಕ್ಕೆ ಸಂಬಂಧಿಸಿದವೇ ಹೊರತು ಈಚಿನವೆನ್ನಲು ತಕ್ಕ ಸಮರ್ಥನೆ ಕಾಣುವುದಿಲ್ಲವೆಂದು ಹೇಳಲಾಗಿದೆ. ಎರಡನೆಯದಾಗಿ ಆ ಕಾಲಕ್ಕೆ ನೀಲ ಕಂಠಶಿವಾರ್ಯರ (೧೪೦೦) ಕ್ರಿಯಾಸಾರ, ಮಗ್ಗೆ ಮಾಯಿದೇವರ (೧೪೩೦) ಅನುಭವ ಸೂತ್ರಗಳು ಪ್ರಕಟವಾಗಿದ್ದುದರಿಂದ ಆಭಾಷ್ಯದ ಸ್ವರೂಪವೇ ಬೇರೆ ಇರುತ್ತಿತ್ತು. ಈಗಿನ ಶ್ರೀಕರಭಾಷ್ಯೋಕ್ತವಾಗಿರುವ ಅಷ್ಟಾವರಣ-ಷಟ್‌ಸ್ಥಲ ,ಹಾಗೂ ಆಚಾರಾದಿ ಲಿಂಗಸ್ಥಲ ಮುಂತಾದ ವಿಚಾರಗಳು ಪರಿಷ್ಕೃತ ಸ್ವರೂಪ ತಳೆಯದೆ ಸ್ಥೂಲರೂಪದಲ್ಲಿಯೇ ಇವೇ ಇವೇ ಮುಂತಾದ ಆಂತರಿಕ ಪ್ರಮಾಣಗಳಿಂದ ಶ್ರೀಕರಭಾಷ್ಯದ ರಚನೆ ಬಸವಪೂರ್ವ ಯುಗದ ವೀರಶೈವ ಸ್ವರೂಪವನ್ನೇ ಅವಲಂಬಿಸಿರುತ್ತದೆ.

ಇನ್ನು ಶ್ರೀಕರ ಭಾಷ್ಯದಲ್ಲಿ 'ಅಪಶೂದ್ರಾಧಿಕರಣ'ದಲ್ಲಿ "ಶೂದ್ರರಿಗೆ" ಬ್ರಹ್ಮ ವಿದ್ಯಾಧಿಕಾರವಿಲ್ಲ" ಎಂದು ಹೇಳಿರುವ ಶ್ರೀಪತಿಯು, ಅಂತ್ಯಜ ಶರಣನೊಬ್ಬನ ಮನೆ ಯಲ್ಲಿ ಊಟಮಾಡಿದನೆಂಬ ಕಾರಣದಿಂದ ಬ್ರಾಹ್ಮಣರು ಆಕ್ಷೇಪಿಸಿದಾಗ ಶಿವಭಕ್ತರ ಹಿರಿಮೆಯನ್ನು ಸಾರುವುದಕ್ಕಾಗಿ ಬ್ರಾಹ್ಮಣರ ಅಗ್ನಿಹೋತ್ರಾದಿಗಳಿಗೆ ಆಗತ್ಯವಾದ ಅಗ್ನಿಯನ್ನು ರೇಷ್ಮೆಬಟ್ಟೆಯಲ್ಲಿ ಕಟ್ಟಿ ಬನ್ನಿಯ ಮರಕ್ಕೆ ಬಿಗಿದಿದ್ದ ಶ್ರೀಪತಿ ಪಂಡಿತನಾಗಿ ರಲಾರ' ಎಂಬ ಇವರ ವಾದವೂ ವಿಚಾರಕ್ಕೆ ನಿಲ್ಲುವುದಿಲ್ಲ. ಏಕೆಂದರೆ ಅಪಶೂದ್ರಾಧಿ ಕರಣದಲ್ಲಿ "ಶುಚಾ ದ್ರವತೀತಿ ಶೂದ್ರಃ' ಎಂದರೆ "ದುಃಖದಿಂದ ಮನಸ್ಸು ಆದ್ರವಿಸಿ ಕಳವಳಗೊಂಡವನು ಶೂದ್ರ" ಎಂಬ ಅರ್ಥದಲ್ಲಿ ಆರಂಭವಾಗಿರುವ ಈ ಅಧಿಕರಣದಲ್ಲಿ ಉಪನಯನ ಸಂಸ್ಕಾರವಿಲ್ಲದ ಶೂದ್ರನಿಗೆ ಬ್ರಹ್ಮವಿದ್ಯಾಧಿಕಾರವಿಲ್ಲವೆಂದು ನಿರ್ಣಯ ವಾಗಿದೆ." ಅಲ್ಲಿ "ಉಪನಯನವು ಅಸಂಸ್ಕಾರಿಯಾದ ಶೂದ್ರನಿಗೆ ಹೇಳಿಲ್ಲ" ಅದು ಹುಟ್ಟಿನಿಂದ ವರ್ಣಾಶ್ರಮಗಳನ್ನು ಒಪ್ಪುವ ವರ್ಣಧರ್ಮಿಯರಿಗೆ ಉಕ್ತವಾಗಿದೆ. ಆದರೆ ವೀರಶೈವವು ಅತಿವರ್ಣಾಶ್ರಮ ಪಂಕ್ತಿಗೆ ಸೇರಿದ್ದು ಎಂದು ಶ್ರೀಕರಭಾಷ್ಯವು ಒಪ್ಪಿದೆ. ವೀರಶೈವವು ವಿಧಿಸಿರುವ ಲಿಂಗಧಾರಣಾತ್ಮಕವಾದ ಶಿವದೀಕ್ಷೆಯೂ ಒಂದು ಸಂಸ್ಕಾರವೇ. ಲಿಂಗಧಾರಣವು "ಶಕ್ತಿಪಾತ" ಎಂದರೆ ಶಿವಕೃಪೆಗೆ ಪಾತ್ರರಾದ ಎಲ್ಲ ಮಾನವರಿಗೂ ವಿಧಿಸಿದೆ. ಶಿವನ ಕೃಪೆಗೆ ಪಾತ್ರರಾದ ಎಲ್ಲ ವರ್ಣ ಮತ್ತು ಆಶ್ರಮದ ವರೂ ಲಿಂಗಭೇದ, ಜಾತಿಭೇದವಿಲ್ಲದೆ ಶಿವದೀಕ್ಷೆ ಪಡೆಯಲು ಅರ್ಹರು ಎಂಬುದು ಅತಿವರ್ಣಾಶ್ರಮಿ ಎನಿಸಿದ ವೀರಶೈವದ ನಿಲುವು.

ಹುಟ್ಟಿನಿಂದ ವರ್ಣಾಶ್ರಮಗಳನ್ನು ಪರಿಗ್ರಹಿಸಿದ್ದು ಈಚಿನ ಸ್ಮೃತಿಗಳ ಕಾಲದಿಂದ. ಅದಕ್ಕೆ ಹಿಂದೆ ವೇದಯುಗದಲ್ಲಿ ಸತ್ಯಕಾಮಜಾಬಾಲ, ಕವಷ ಐಲೂಷ ಮುಂತಾದ ಅವರ- ವರ್ಣಜರೂ, ಗಾರ್ಗಿ, ಮೈತ್ರೇಯಿ ಮುಂತಾದ ಸ್ತ್ರೀಯರೂ ಉಪನಯನ ಸಂಸ್ಕಾರ ಪಡೆದು ಬ್ರಹ್ಮವಾದಿಗಳಾಗಿದ್ದ ಉದಾಹರಣೆಗಳಿವೆ. ಇವೇ ಮುಂತಾದ ವಿಚಾರಗಳನ್ನು

ನಾನು ಶ್ರೀಕರ ಭಾಷ್ಯಕ್ಕೆ ಬರೆದಿರುವ ಭೂಮಿಕೆ (ಕನ್ನಡ ಪು ೨೦-೨೮) ಯಲ್ಲಿ ವಿಸ್ತಾರವಾಗಿ ಚರ್ಚಿಸಲಾಗಿದೆ. ಅದೇ ಶ್ರೀಕರ ಭಾಷ್ಯದ ಪ್ರಮಿತಾಧಿಕರಣ, ಮತ್ತು ವಿಧುರಾಧಿಕರಣಗಳಲ್ಲಿ ಮುಮುಕ್ಷುಗಳಾದ ಎಲ್ಲ ಮಾನವರೂ ಲಿಂಗಧಾರಣಾತ್ಮಕವಾದ ಶಿವದೀಕ್ಷೆ ಪಡೆದು ಬ್ರಹ್ಮವಿದ್ಯಾಧಿಕಾರಿಗಳಾಗಬಹುದು ಎಂದು ಭಾಷ್ಯಕಾರರೇ ಪ್ರತಿಪಾದಿಸಿದ್ದಾರೆ. (ಕನ್ನಡ ಭೂಮಿಕೆ ಪುಟ ೧೧೫-೧೧೭)

ಇನ್ನು ಅಪಶೂದ್ರಾಧಿಕರಣದಲ್ಲಿ ಉಕ್ತವಾದ ಶೂದ್ರ ಪದಕ್ಕೆ ಪಾಠಕಾಧಮತ್ವ ಅಜ್ಞತ್ವ, ಮೂರ್ಖತ್ವ ಮುಂತಾದ ಗುಣಧರ್ಮಗಳಿಂದ ಕೂಡಿದವನೇ ಹೊರತು ಜಾತಿಶೂದ್ರನಲ್ಲವೆಂಬುದನ್ನು ಪ್ರಮಾಣಪೂರ್ವಕವಾಗಿ ಪ್ರತಿಪಾದಿಸಲಾಗಿದೆ. ಈ ಎಲ್ಲ ಕಾರಣಗಳಿಂದ ಅಗ್ನಿಪವಾಡವನ್ನು ಮೆರೆದ ಶ್ರೀಪತಿ ಪಂಡಿತರೇ ಶ್ರೀಕರಭಾಷ್ಯಕರ್ತರೆಂಬುದನ್ನು ನಿರ್ಧರಿಸಲು ಯಾವ ಸಂದೇಹವೂ ಇಲ್ಲ.

ಇದೂ ಅಲ್ಲದೆ ಪಂಡಿತತ್ರಯೋಕ್ತರಾದ ಶ್ರೀಪತಿಪಂಡಿತಾರಾಧ್ಯರೇ ಶ್ರೀಕರ-ಭಾಷ್ಯವನ್ನು ರಚಿಸಿದರೆಂಬ ಬಗ್ಗೆ ಕ್ರಿ. ಶ. ೧೪೫೦ರಲ್ಲಿದ್ದ ಸಾಸಲ ಚಿಕ್ಕಣಾರಾಧ್ಯರು ರಚಿಸಿರುವ " ಪಂಚಬ್ರಹ್ಮೋದಯಭಾಷ್ಯ " ನಂದಿಕೇಶ್ವರನ ಲಿಂಗಧಾರಣ ಚಂದ್ರಿಕೆ " ಮತ್ತು ವೃಷಭ ಪಂಡಿತರ ತೈತ್ತಿರೀಯೋಪನಿಷತ್ ಭಾಷ್ಯಗಳಲ್ಲಿ ಉಕ್ತವಾಗಿರುವುದರಿಂದಲೂ ಮತ್ತು ಶ್ರೀಕರಭಾಷ್ಯೋಕ್ತ ವಾದ ಅನೇಕ ವಿಚಾರಗಳು ಕ್ರಿಯಾಸಾರ (೧೪೦೦) ' ವೀರಶೈವಾನಂದ ಚಂದ್ರಿಕೆ ' (೧೭೫೦) ಮುಂತಾದ ಗ್ರಂಥಗಳಲ್ಲಿ ಸ್ವೀಕೃತವಾಗಿರುವುದರಿಂದಲೂ ಕ್ರಿ. ಶ. ೧೪-೧೫ ನೆಯ ಶತಮಾನಗಳಲ್ಲಿ ಮತ್ತೊಬ್ಬ ಶ್ರೀಪತಿ ಇದ್ದನೆಂಬ ಬಗೆಗೆ ಅಥವಾ ಆತ ಶ್ರೀಕರಭಾಷ್ಯವನ್ನು ಬರೆದನೆಂಬ ಬಗೆಗೆ ಚರಿತ್ರೆಯಲ್ಲಿ ಎಲ್ಲಿಯೂ ಉಲ್ಲೇಖಗಳು ಕಾಣದಿರುವುದರಿಂದಲೂ, ೧೧ ನೇ ಶತಮಾನದ ಶ್ರೀಪತಿ ಪಂಡಿತರೇ ಶ್ರೀಕರಭಾಷ್ಯ ಕರ್ತೃ ಎಂದು ದೃಢವಾಗಿ ಹೇಳಬಹುದು.

ಕಡೆಯದಾಗಿ ಶ್ರೀಯುತ ಮಲ್ಲಪ್ಪನವರು ತಮ್ಮ ಲೇಖನಗಳ ಉಪಸಂಹಾರದಲ್ಲಿ " ಶ್ರೀಕರ ಭಾಷ್ಯವು ಯಾವ ಕಾಲದಲ್ಲಿಯೇ ರಚಿತವಾಗಿರಲಿ ಅದು ವಿದ್ವತ್ ಪೂರ್ಣವಾದ ಗ್ರಂಥವೆಂಬುದರಲ್ಲಿ ಸಂದೇಹವಿಲ್ಲ. ಅದರಲ್ಲಿ ಉಕ್ತವಾದ ಪ್ರತಿಯೊಂದು ವಿಷಯಕ್ಕೂ ವಿಪುಲವಾದ ಆಧಾರಗಳಿವೆ. ತಾವು ಪ್ರತಿಪಾದಿಸುವ ವಿಷಯಗಳನ್ನು ಸಮರ್ಥಿಸುವಲ್ಲಿ ಗ್ರಂಥಕರ್ತರು ನೈಪುಣ್ಯವನ್ನು ತೋರಿಸಿದ್ದಾರೆ. ಬಸವೇಶ್ವರರಿಂದ ಸಂಸ್ಕರಿಸಲ್ಪಟ್ಟ ವೀರಶೈವವೂ ವೇದದ ಜ್ಞಾನಕಾಂಡವನ್ನು ಒಪ್ಪಿಕೊಂಡಿದೆ. ಲಿಂಗಧಾರಣಾದಿಗಳನ್ನು ಎತ್ತಿ ಹಿಡಿದಿರುವ ಶ್ರೀಕರಭಾಷ್ಯವು ಲಿಂಗಧಾರಿಗಳೆಲ್ಲರಿಗೂ ಮಾನ್ಯವಾಗಿದೆ" ಮುಂತಾಗಿ ಹೇಳಿ ತಮ್ಮ ಸಹಜ ಸಹೃದಯತೆಯನ್ನು ವ್ಯಕ್ತಪಡಿಸಿದ್ದಾರೆ. ಗುಣಗ್ರಾಹಿಗಳೂ ಸತ್ಯಶೋಧಕರೂ ಆಗಿರುವ ಶ್ರೀಯುತರ ವಿಚಾರ ಸರಣಿ ಅಭಿನಂದನೀಯ.

ಈ ದಿಸೆಯಲ್ಲಿ ನನ್ನ ಶ್ರೀಕರಭಾಷ್ಯ ಭೂಮಿಕೆ, ಈ ಬಗೆಗೆ ಆ ಭಾಷ್ಯಕ್ಕೆ ಬರೆದಿರುವ ಅವತರಣಿಕೆಗಳ ಸಮೀಕ್ಷೆ ಮತ್ತು ಪ್ರಕೃತ ಲೇಖನಗಳಲ್ಲಿ ಹೇಳಬೇಕಾದ ಅಂಶಗಳೆಲ್ಲವನ್ನು ನಿವೇದಿಸಿರುವುದರಿಂದ ಮತ್ತೆ ಮತ್ತೆ ಅದೇ ವಿಷಯಗಳನ್ನು ಪಿಷ್ಟಪೇಷಣ ಮಾಡುವುದರಲ್ಲಿ ನನಗೆ ಆಸಕ್ತಿಯಿಲ್ಲ. ಈ ನಿಟ್ಟಿನಲ್ಲಿ ನನ್ನ ಲೇಖನಿಯನ್ನು ವಿರಮಿಸಿರುತ್ತೇನೆ. ಸಹೃದಯರು ಸಾವಧಾನದಿಂದ ಪರಿಶೀಲಿಸುವರೆಂಬ ಭರವಸೆ ನನಗಿದೆ.

ಎಂ. ಜಿ. ನಂಜುಂಡಾರಾಧ್ಯ

17-5-1980

## ಶ್ರೀ ರಾಮಾನುಜಾಚಾರ್ಯರು ಮತ್ತು ಶ್ರೀಪತಿ ಪಂಡಿತಾರಾಧ್ಯರ ಜೀವನ ಮತ್ತು ಮುಖ್ಯ ಘಟನೆಗಳ ಬಗೆಗೆ ಉಲಬ್ಧವಿರುವ ಆಧಾರದ ಮೇಲೆ ಕಾಲಸೂಚಿ

**ಶ್ರೀ ರಾಮಾನುಜರು (ಕ್ರಿ. ಶ. ಸು. ೧೦೧೭-೧೧೩೭)**

| | | |
|---|---|---|
| ೧. | ಜನನ | ೧೦೧೭ |
| ೨. | ಶಿಕ್ಷಣ (೧೬ ವರ್ಷಗಳು) | ೧೦೩೩ |
| ೩. | ಮದುವೆ | ೧೦೩೫ |
| ೪. | ಪತ್ನಿಯೊಡನೆ ವಿರಸ | ೧೦೪೫ |
| ೫. | ಸಂನ್ಯಾಸ ಸ್ವೀಕಾರ | ೧೦೫೦ |
| ೬. | ಶ್ರೀಭಾಷ್ಯ ರಚನೆ | ೧೦೫೦-೬೦ |
| ೭. | ಕಾಶ್ಮೀರದಲ್ಲಿ ಮನ್ನಣೆ | ೧೦೬೫ |
| ೮. | ತಿರುಪತಿ ವೀರೇಶ ವೇಂಕಟೇಶನಾಗಿ ಪರಿವರ್ತನೆ | ೧೦೭೦ |
| ೯. | ಚೋಳರಾಜ ವಿರೋಧ-ಮೈಸೂರು ರಾಜ್ಯ ಪ್ರವೇಶ | ೧೦೯೦-೧೦೯೬ |
| ೧೦. | ಅವಸಾನ (ಶ್ರೀರಂಗದಲ್ಲಿ) | ೧೧೩೭ |

**ಶ್ರೀಪತಿಪಂಡಿತರು (ಕ್ರಿ. ಶ. ಸು. ೧೦೨೫-೧೧೧೦)**

| | | |
|---|---|---|
| ೧. | ಜನನ (ಬೆಜವಾಡ) | ಸು. ೧೦೨೫ |
| ೨. | ಕಾಶಿಯಲ್ಲಿ ಶಿಕ್ಷಣ | ೧೦೫೦ |
| ೩. | ಶ್ರೀಶೈಲದ ಏಕೋರಾಮಸಿದ್ಧ (ವಿರೂಪಾಕ್ಷ ದೇಶೀಕೇಂದ್ರ) ರಿಂದ ಕಾಶಿಯಲ್ಲಿ ವೀರಶೈವ ದೀಕ್ಷೆ | ೧೦೬೦ |
| ೪. | ಬೆಜವಾಡಕ್ಕೆ ಆಗಮನ | ೧೦೬೧ |
| ೫. | ತೇಲಿಕ (ಸಜ್ಜನ) ಜನಾಂಗದ ಗುರುತ್ವ ಸ್ವೀಕಾರ | ೧೦೭೦ |
| ೬. | ಶಿವಭಕ್ತರ ಹಿರಿಮೆಯನ್ನು ಮೆರೆಸಲು ಮಲ್ಲೇಶ್ವರಾಲಯದಲ್ಲಿ ಅಗ್ನಿ ಬಂಧನ ಪವಾಡ | ೧೦೭೫ |
| ೭. | ಶ್ರೀಕರಭಾಷ್ಯ ರಚನೆ | ೧೦೮೦-೧೧೦೦ |
| ೮. | ಸಮಾಧಿ (ಬೆಜವಾಡ) | ೧೧೧೦ |

# ಪ್ರಬೋಧ ಪುಸ್ತಕಮಾಲೆ

ಬಸವೇಶ್ವರ ರಸ್ತೆ, ಮೈಸೂರು-೪

ಸ್ಥಾಪನೆ ೧೯೪೫

ಆಸ್ಥಾನವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ ವಿರಚಿತ ಗ್ರಂಥಗಳು

ಸಂಸ್ಕೃತ

1 ಶ್ರೀಕರಭಾಷ್ಯಂ (ಶ್ರೀಪತಿ ಪಂಡಿತಾರಾಧ್ಯ ವಿರಚಿತ ಸಂಸ್ಕೃತ-ಕನ್ನಡ ಭೂಮಿಕೆ ಯೊಡನೆ ಎರಡು ಸಂಪುಟಗಳಲ್ಲಿ; ಮೈಸೂರು ವಿಶ್ವವಿದ್ಯಾಲಯದ ಪ್ರಕಟನೆ) (೧೯೭೮–೭೯.) 70-00

2 ಬ್ರಹ್ಮಸೂತ್ರವೃತ್ತಿ (ಉಮಚಗಿ ಶಂಕರಶಾಸ್ತ್ರಿ ಕೃತ 1974) 10-00

3 ಮುಂಡಕೋಪನಿಷತ್ ವೀರಶೈವಭಾಷ್ಯಂ (ಕನ್ನಡ ತಾತ್ಪರ್ಯಸಹಿತ-1960) 5-00

4 ಕೈವಲ್ಯೋಪನಿಷತ್ ಸಾದಾಶಿವಭಾಷ್ಯಂ (ಕನ್ನಡ ತಾತ್ಪರ್ಯ ಸಹಿತ- 1951) 5-00

5 ಈಶಾವಾಸ್ಯೋಪನಿಷತ್ ಶಾಂಕರೀವ್ಯಾಖ್ಯೆ (ಕನ್ನಡ ತಾತ್ಪರ್ಯ ಸಹಿತ-1979) 2-00

6 ಸಂಸ್ಕೃತ ಸ್ತವನ ಮಂಜರಿ (ಬಸವಪ್ಪ ಶಾಸ್ತ್ರಿಕೃತ-1948) 1-00

7 ಮಾದರ ಚನ್ನಃ (ನಾಟಕ-1969) 1-00

8 ಬಸವ ವಚನಾಮೃತಂ (ಭಾಷಾಂತರ) 1966 (ಬಸವ ಸಮಿತಿ ಪ್ರಕಾಶನ) 1-00

9 ಶ್ರೀಶೈಲಪಂಡಿತಾರಾಧ್ಯ ಸುಪ್ರಭಾತಂ 1963 0-50

10 ಚೇಳ್ಗುರಿಕಿ ಎರ್ರಿತಾತ ಸುಪ್ರಭಾತಂ 1963 (ಚೇ. ಪ್ರಕಾಶನ) 0-50

11 ಶಿವಯೋಗಿ ಎರ್ರಿತಾತ ತ್ರಿಶತಿ ನಾಮಾವಳಿಃ 1972 (ಚೇಳ್ಗುರಿಕಿ ಪ್ರಕಾಶನ) 0-50

12 ಕೂಡಲ ಸಂಗಮೇಶ್ವರ ಸುಪ್ರಭಾತಂ (ಬಸವಅಷ್ಟಮ ಶತಮಾನೋತ್ಸವ ಪ್ರಸಾರಿತ) (ಅಮುದ್ರಿತ)

13 ಮಲೆಯ ಮಾದೇಶ್ವರ ಸುಪ್ರಭಾತಂ (ಬೆಂ. ಆಕಾಶವಾಣಿ ಪ್ರಸಾರಿತ) „

14 ರೇಣುಕಗೀತಾ ಭಾಷ್ಯಂ (ಸಿದ್ಧಾಂತ ಶಿಖಾಮಣಿ ಶ್ರೀಮರಿತೋಂಟದಾರ್ಯ ವ್ಯಾಖ್ಯಾ ಸಂಗೃಹೀತ) „

15 ತೈತ್ತಿರೀಯೋಪನಿಷತ್ ಶೈವ ಭಾಷ್ಯಂ (ವೃಷಭ ಪಂಡಿತ ಕೃತ) „

16 ವೈದಿಕಷಟ್‌ಸ್ಥಲ ಲಿಂಗ ಪೂಜಾ ವಿಧಿ (ಮಂತ್ರಾರ್ಥ ಸಹಿತ-ಮೂರನೆ ಆವೃತ್ತಿ 1973) 6-00

17 ಸಂಕ್ಷಿಪ್ತ ಷ॥ ಲಿಂಗಪೂಜಾವಿಧಿ ( „ ) 1973. 1-00

18 ವೀರಶೈವ ಪೂರ್ವಪ್ರಯೋಗ ರತ್ನಂ (1950-1973)
(ಮುಖ್ಯ ಮಂತ್ರಾರ್ಥ ಸಹಿತ) (ಮೂರನೇ ಆವೃತ್ತಿ) 15-00
19 ವೀರಶೈವಾಗಮ ಪ್ರಯೋಗ ರತ್ನಂ 1968 15-00
20 ವೀರಶೈವ ಉತ್ತರ ಪ್ರಯೋಗಃ (ಅಂತ್ಯೇಷ್ಟಿ) 1970 2-00
21 ವೀರಶೈವ ಸದಾಚಾರ ಸಂಗ್ರಹಃ 1967 2-00
*22 ಶಿವಪಂಚಾಕ್ಷರೀ ಸ್ತೋತ್ರಂ (ಶ್ರೀ ಶಂಕರಾಚಾರ್ಯ ವಿರಚಿತ
ಕ. ತಾತ್ಪರ್ಯ ಸಹಿತ) 1956 0-50
23 ಸ್ತೋತ್ರ ಸಂಗ್ರಹಃ 19[illegible]8 1-00
24 ಸ್ತೋತ್ರಮಂಜರಿ. 1970 (ಮೂರನೇ ಆವೃತ್ತಿ) 1-00
25 ಶ್ರೀಕರ ಭಾಷ್ಯಂ (ಚತುಸ್ಸೂತ್ರೀ) (ಉ. ಶಂ. ಶಾಸ್ತ್ರಿ ವಿರಚಿತ
ಕನ್ನಡ ಭಾವಾರ್ಥ ಸಹಿತ) 1973 5-00

ಕನ್ನಡ (ಪದ್ಯ)

26 ಶಿವನ ಸೋಲು (ಗೀತ ನಾಟಕ-ದ್ವಿತೀಯಆವೃತ್ತಿ) 1942-1950 2-00
27 ಪಕ್ಷ್ಮಲಾಕ್ಷಿ (ಲಘು ಕಾವ್ಯ) 1947 1-00
28 ಸಿರಿಗನ್ನಡ ಶಿಶುಪಾಲ ವಧಂ 1956 2-00
29 ಕನ್ನಡ ಕಿರಾತಾರ್ಜುನೀಯ (ಅಮುದ್ರಿತ)
30 ಕನ್ನಡ ರಘುವಂಶಂ (ಎಂಟು ಸರ್ಗ ಮಾತ್ರ) 1955 "
31 ಹೃದಯ ಮಂಥನ (1968) "
32 ಮಧುರ ಚಿಂತನ (1981) 5-00
33 ವಿಜಯನಾದ (ಕವನ ಸಂಗ್ರಹ) 1951 2-00
34 ಎರ್ರಿತಾತ ಸುಪ್ರಭಾತ 1964 (ಜೋಳ್ಗರಿಕಿ ಪ್ರಕಾಶನ) 1-00
35 ರೇಣುಕ ವಿಜಯ (ಅಪೂರ್ಣ) ಬಸವಪ್ಪಶಾಸ್ತ್ರಿ ಕೃತ 1946 1-00

ಗದ್ಯ

36 ಶ್ರೀಕರ ಭಾಷ್ಯ ಪ್ರಶಸ್ತಿ (1980) 20-00
37 ಗೀತೆ, ಅಂತರ್ವಾಣಿ-ಗೀತೆಯ ಅಂತರ್ವಾಣಿ 1958 5-00
*38 ಇಷ್ಟಲಿಂಗ ವಿಜ್ಞಾನ 1946 2-00
ಇಷ್ಟಲಿಂಗ ವಿಜ್ಞಾನಮು (ತೆಲುಗು-ಹೈದರಾಬಾದ್ ಪ್ರಕಾಶನ) 5-00
39 ಶಿವಲಿಂಗ ಚಾರಿತ್ರ (ಶಾಂತವೀರ ದೇಶಿಕ) 1966 2-00
40 ವೈರಾಗ್ಯ ಸಿದ್ಧವಿರೂಪಾಕ್ಷ ದೇಶಿಕೇಂದ್ರ 1968 2-00
41 ಶಿವದೇವವಿಜಯ 1949 5-00

42 ಶಿವರಾತ್ರಿ ಶಿವಾಚಾರ್ಯ 1961 5-00

*43 ಹೇಮರೆಡ್ಡಿ ಮಲ್ಲಮ್ಮ-ರಾಜಯೋಗಿವೇಮಣ್ಣ 1950 1-00

44 ವೀರಶೈವ ವೇದಾಧಿಕಾರ ವಿಜಯ (ಪಂಚಾಚಾರ್ಯ ಪ್ರೆಸ್ ಪ್ರಕಾಶನ) (1969) 2-00

45 ಚಾರುದತ್ತ 1962 2-00

46 ಭೀಮೇಶ್ವರ ಕ್ಷೇತ್ರಗಳು 1965 1-00

47 ಶೈವದರ್ಶನ ಇತಿಹಾಸ-ತತ್ತ್ವ ಪ್ರಕಾಶ 1974 5-00

48 ಗಿರಿಜಾ ಕಲ್ಯಾಣ (ಹರಿಹರ ಕವಿ ಕೃತ 1977, ಕ. ಸಾ. ಪ್ರಕಾಶನ) 10-00

49 ರೇವಣ ಸಿದ್ಧೇಶ್ವರ (ಭಾರತ-ಭಾರತಿ ಪುಸ್ತಕ ಸಂಪದ) 1975 1-00

50 ವೈದಿಕ ವಾಙ್ಮಯ ಚರಿತ್ರೆ 1950 (ಮೆಕ್ಡೋನಾಲ್ಡ್) ವಿರಚಿತ ಅನುವಾದ (ಅಮುದ್ರಿತ)

51 ಅ ಕಾ. ಬಸವಪ್ಪ ಶಾಸ್ತ್ರಿಗಳ ಸಮಗ್ರ ಕೃತಿಗಳು 1977 60-00

## ಜೀವನ ಚರಿತ್ರೆಗಳು

*52 ಕಾ. ಬಸವಪ್ಪ ಶಾಸ್ತ್ರಿಗಳು (ಜೀವನ-ಕೃತಿ ವಿಮರ್ಶೆ) 1945 3-00

53 ಅ. ಕಾ. ಬಸವಪ್ಪ ಶಾಸ್ತ್ರಿ ಐ. ಬಿ. ಎಚ್. ಪ್ರಕಾಶನ) 1971 2-00

54 ದಾಸ ದುಗ್ಗಳೆ 1972 —ಡಿಟೋ— 2-00

## ಮೈಸೂರು ವಿಶ್ವವಿದ್ಯಾನಿಲಯ ಪ್ರಸಾರಾಂಗ ಪ್ರಕಟನೆಗಳು

55 ಕವಿ ಮುರಾರಿ 1970 " 0-37

56 ಮಾಘ ಕವಿ 1972 " 0-25

57 ಮಹಾಕವಿ ಭಾರವಿ 1969 " 0-37

58 ಕವಿ ಶ್ರೀ ಹರ್ಷ 1970 " 0-37

59 ಭಟ್ಟ ನಾರಾಯಣ 1971 " 0-37

60 ಇಡಗೂರು ರುದ್ರಕವಿ (ಜೀವನ ಕೃತಿವಿಮರ್ಶೆ) 1964 1-00

61 ಶ್ರೀಗುರು ಹಾಲು ಸ್ವಾಮಿಗಳು 1954 1-00

62 ಗುಬ್ಬಿ ತೋಟದಪ್ಪನವರು 1961 1-00

63 ಜೀವ ಜ್ಯೋತಿ (ಉದ್ದಾನ ಶಿವಯೋಗಿ) 1941 0-50

64 ಗೌರೀ ಶಂಕರ ಸ್ವಾಮಿಗಳು 1952 0-50

*65 ಎಚ್. ಸಿದ್ಧಯ್ಯನವರು 19:4 0-50

66 ಪಿ. ಆರ್. ಕರಿಬಸವ ಶಾಸ್ತ್ರಿ 1979 1-00

67 ಎನ್. ಆರ್. ಕರಿಬಸವಶಾಸ್ತ್ರಿ (ಜ. ತೋಂಟದಾರ್ಯ ಮಠದ ಪ್ರಕಾಶನ ಗದಗ) 1979 1-00

68 ಉಮಚಗಿ ಶಂಕರ ಶಾಸ್ತ್ರಿ 1981 (ಜ. ತೋಂಟದಾರ್ಯ ಮಠದ ಪ್ರಕಾಶನ, ಗದಗ.) 1-00
69 ಸಿರಸಿ ಗುರುಶಾಂತಶಾಸ್ತ್ರಿ —"— —"— 1 00
70 ತೋಪಿನ ಮಠದ ಷಡಕ್ಷರ ಶಿವಯೋಗಿ 1976 2-00
71 ಭಾರತೀಯ ದರ್ಶನ (ಸಂಸ್ಕೃತ ವಿದ್ವತ್ ಪರೀಕ್ಷೆ ಪಠ್ಯಗ್ರಂಥ 1979 ಇತರ ರೊಡನೆ ಸಂಪಾದಿತ) 15-00
72 ಶ್ರೀ ಶೈಲ ಪಂಡಿತಾರಾಧ್ಯ ಚರಿತ್ರಮುಂ ತೆಲುಗು (ಪುಲ್ಲ ಕವಿ) (ಸಂಪಾದಿತ 1954) 5-00
73 ದರ್ಶನ ದೀಪ್ತಿ (ಸಂಪಾದಿತ) (ಗಿರಿಯಾಪುರದ ಪ್ರಕಾಶನ) 1973 10-00
74 ವಿಭೂತಿ —"—"— 1967 10-00
75 ಶ್ರೀ ಶೈಲ ಪೀಠದರ್ಶನ (ನಿಡುಮಾಮಿಡಿ ಶ್ರೀಶೈಲ ಗ್ರಂಥಮಾಲೆ ಪ್ರಕಾಶನ, (1967) 10-00
76 ದೇವರ ದಾಸಿಮಾರ್ಯಪ್ರಶಸ್ತಿ (ಸಂಪಾದಿತ) 1953 10-00

(ಪಠ್ಯ ಪುಸ್ತಕಗಳು)

77 ಅರ್ಜುನ ವಿಜಯ (1948) 1-00
78 ಚಂದ್ರಗುಪ್ತನ ಭಾಗ್ಯ (ಪಠ್ಯ ಗ್ರಂಥ S.S.L.C.) 1961 1-50
79 ಹೈಸ್ಕೂಲು ಮೊದಲ ತರಗತಿ ಪದ್ಯ 1952 (VIIIth Std) 0-60
80 —"— (IXth—"—) 0-60
81 ಸತ್ಯವ್ರತಿ ಭೀಷ್ಮ (1964) 2-00
82 ಮಗ್ಗೆ ಮಾಯಿದೇವರು ಮತ್ತು ಅವರ ಕೃತಿಗಳು .......
83 ಹಿಂದೂ ಧರ್ಮ ಮತ್ತು ವೀರಶೈವ ಸಂಸ್ಕೃತಿ ........

